ಭಾರತೀಯ ಜಾನಪದ ಮಾಲೆ

# ಪ್ರಪಂಚದ ಬಾಲ್ಯದಲ್ಲಿ

ಭಾರತದ ಗುಡ್ಡಗಾಡುಗಳಿಂದ ಆಯ್ದ ಜಾನಪದ ಕಥೆಗಳು

**ವೆರಿಯರ್ ಎಲ್ವಿನ್**

ಚಿತ್ರಗಳು

**ಅಮೀನಾ ಜಯಾಲ್**

ಕನ್ನಡ ಅನುವಾದ

**ಕೆ. ಎಸ್. ನರಸಿಂಹಸ್ವಾಮಿ**

ಮುನ್ನುಡಿ

**ರಾಮಚಂದ್ರ ಗುಹ**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-2056-4

ಈ ಕನ್ನಡಾನುವಾದದ ಮೊದಲ ಆವೃತ್ತಿಯನ್ನು
ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಪರವಾಗಿ
1965ರಲ್ಲಿ ಮೈಸೂರಿನ ಕಾವ್ಯಾಲಯ ಪ್ರಕಟಿಸಿತ್ತು.
ಮೊದಲ ನ್ಯಾ.ಬು.ಟ್ರ. ಆವೃತ್ತಿ : 1997 (ಶಕ 1918)

When the World was Young *(Kannada)*
**ರೂ. 22.00**
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ-110016 ಇವರಿಂದ ಪ್ರಕಟಿತ.

# ಪರಿವಿಡಿ

## ಮಾತಾಡುವ ಪ್ರಾಣಿಗಳು



## ಮಾಯಾಪ್ರಪಂಚದಲ್ಲಿ ನಡೆದ ಸಾಹಸಕಾರ್ಯಗಳು



## ಎಲ್ಲದರ ಕೊನೆ

# ಮುನ್ನುಡಿ

ಈ ಪುಸ್ತಕದಲ್ಲಿ ಭಾರತದ ಬುಡಕಟ್ಟು ಸಮುದಾಯಗಳ ವೈವಿಧ್ಯಮಯವಾದ ಆಯ್ದ ಜಾನಪದ ಕಥೆಗಳಿವೆ. ಈ ಜಗತ್ತು ನಿರ್ಮಾಣಗೊಂಡದ್ದು ಹೇಗೆ, ನದಿ ಹುಟ್ಟಿದ್ದು ಹೇಗೆ ಹಾಗೂ ಭೂಕಂಪನಗಳು ಸಂಭವಿಸಲು ಕಾರಣವೇನು- ಇಂತಹ ವಿಚಾರಗಳ ಬಗ್ಗೆ ಇಲ್ಲಿ ಅಚ್ಚರಿ ಎನಿಸುವ ವಿವರಣೆ ಲಭ್ಯವಿದೆ. ಈ ಕಥೆಗಳು ಆಸಕ್ತಿ ಮೂಡಿಸುವಂತಿವೆ ಹಾಗೂ ವೈಜ್ಞಾನಿಕವಾದ ಮತ್ತು ಒಂದೇ ವಿಷಯ ಕುರಿತ ಒಣ-ಒಣ ವಿವರಣೆಗಳಿಂದ ಹೊರತಾಗಿ ತನ್ಮಯಗೊಳ್ಳುವಂತೆ ಮಾಡುತ್ತವೆ. ಇಲ್ಲಿನ ಕಥೆಗಳಲ್ಲಿ, ಮಾನವ ಮೊದಲು ಮಾತನಾಡಿದ್ದು ಮತ್ತು ಸುತ್ತಲಿನ ಜಗತ್ತನ್ನು ಅರ್ಥಮಾಡಿಕೊಳ್ಳತೊಡಗಿದ್ದು ಹೇಗೆ, ಬಟ್ಟೆ ಮತ್ತು ಉಡುಪುಗಳ ಬಳಕೆ ಹಾಗೂ ಬೆಂಕಿಯನ್ನು ಕಂಡು ಹಿಡಿದ ಬಗೆ- ಇವುಗಳ ಬಗ್ಗೆ ವಿವರಣೆ ಇದೆ. ಕೆಲವು ಕಥೆಗಳಲ್ಲಿ ಮಾನವ ಮತ್ತು ಪ್ರಾಣಿಗಳ ನಡುವಿನ ಪ್ರೀತಿಯ ಅಥವಾ ದ್ವೇಷದ ಸಂಬಂಧದ ವಿವರಗಳಿವೆ. ಪ್ರಾಣಿಗಳ ಗುಣ-ಸ್ವಭಾವದ ಮೂಲ ಪರಿಚಯವನ್ನು ನೀಡಲಾಗಿದೆ. ಇಂತಹ ಕಥೆಗಳಲ್ಲಿ ನಾವು ಕಪ್ಪೆಗಳಿಗೆ ಅಷ್ಟು ತೆಳುವಾದ ಕಾಲುಗಳು ಏಕೆ ಇವೆ ಮತ್ತು ಆನೆಗಳಿಗೆ ರೆಕ್ಕೆಗಳು ಏಕಿಲ್ಲ ಎಂಬಿತ್ಯಾದಿ ವಿಷಯಗಳ ಬಗ್ಗೆ ಮಾಹಿತಿ ಪಡೆಯುತ್ತೇವೆ.

ಈ ಕಥೆಗಳ ವೈವಿಧ್ಯತೆ ಅವುಗಳ ಭೌಗೋಳಿಕ ವಲಯಗಳಿಕೆ ಅನುಗುಣವಾಗಿ ಹೊಂದಿಕೊಂಡಿದೆ . ಏಕೆಂದರೆ ಈ ಕಥೆಗಳು ಮಧ್ಯಭಾರತದ ಅರಣ್ಯಗಳಲ್ಲಿ ವಾಸಿಸುವ ಬೈಗಾ ಎಂಬ ಮೂಲ ಆದಿವಾಸಿಗಳಿಂದ ಮೊದಲ್ಗೊಂಡು, ಅರುಣಾಚಲ ಪ್ರದೇಶದಲ್ಲಿನ ಸಿಯಾಂಗ್ ನದೀ ದಂಡೆ ಪ್ರದೇಶಗಳಲ್ಲಿ ಕಂಡು ಬರುವ ಮಿನ್‌ಯಾಂಗ್ ಜನರ ವರೆಗೆ ಹರಡಿಕೊಂಡಿವೆ. ಅಲ್ಲದೆ ಜನರ ಸಮೃದ್ಧವಾದ ಹಾಗೂ ವೈವಿಧ್ಯಮಯವಾದ ಜೀವನ ವಿಧಾನವನ್ನು ಪರಿಚಯಿಸುತ್ತವೆ. 1902ರಲ್ಲಿ ಜನಿಸಿದ ವೆರಿಯರ್ ಎಲ್ವಿನ್ ಈ ಶತಮಾನದ ಪ್ರಮುಖ ಮಾನವಶಾಸ್ತ್ರಜ್ಞರಲ್ಲಿ ಒಬ್ಬರಾಗಿದ್ದಾರೆ. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಅತ್ಯುತ್ತಮ ವಿದ್ವತ್ ಪ್ರತಿಭೆ ಸಂಪಾದಿಸಿದ ಎಲ್ವಿನ್ 1927ರಲ್ಲಿ ಮೊದಲು ಭಾರತಕ್ಕೆ ಬಂದರು. ಭಾರತಕ್ಕೆ ಬಂದೊಡನೆಯೇ ಅವರು ಮಹಾತ್ಮಾ ಗಾಂಧೀ ಅವರ ಸಂಪರ್ಕ ಪಡೆದರು. ಜೊತೆಗೆ ಬ್ರಿಟಿಷ್ ಆಡಳಿತದ ವಿರುದ್ಧ ಬಂಡೆದ್ದರು. ಈ ಇಂಗ್ಲಿಷ್ ವ್ಯಕ್ತಿ ಎಲ್ವಿನ್ ಬ್ರಿಟಿಷ್ ಆಡಳಿತದಿಂದ ಭಾರತ ಬಿಡುಗಡೆ ಹೊಂದಬೇಕೆಂದು ತೀವ್ರ ಪ್ರಚಾರಕಾರ್ಯ ಕೈಗೊಂಡರು.

1932ರಲ್ಲಿ ಎಲ್ವಿನ್ ಅವರು ಶಾಮರಾವ್ ಹಿವಳೆ ಎಂಬ ತಮ್ಮ ಆಜೀವ ಸಂಗಾತಿಯೊಂದಿಗೆ ಮಧ್ಯಪ್ರದೇಶದ ಮಾಂಡ್ಲಾ ಜಿಲ್ಲೆಯ ಗೊಂಡ ಎಂಬ ಗ್ರಾಮದಲ್ಲಿ ವಾಸ್ತವ್ಯ ಹೂಡಿದರು. ಅಲ್ಲಿ ಈ ಇಬ್ಬರೂ ಸ್ನೇಹಿತರು ಸೇರಿಕೊಂಡು ಅಲ್ಲಿನ ಆದಿವಾಸಿಗಳಿಗೆ ಆಧುನಿಕ ಶಿಕ್ಷಣ ಮತ್ತು ಆಧುನಿಕ ಔಷಧಿಗಳನ್ನು ನೀಡಲು ಗೊಂಡ ಸೇವಾ ಮಂಡಲ ಎಂಬ ಸೇವಾ ಸಂಸ್ಥೆಯೊಂದನ್ನು ಸ್ಥಾಪಿಸಿದರು. ಅವರು ಆದಿವಾಸಿಗಳೊಂದಿಗೆ ಕಳೆದ ಸವಿನೆನಪುಗಳ ವರ್ಣನೆಯನ್ನು ಎಲ್ವಿನ್ ಬರೆದ ಲೀವ್ಸ್

ಫ್ರಂ ದಿ ಜಂಗಲ್ ಎಂಬ ಪುಸ್ತಕದಲ್ಲಿ ನೋಡಬಹುದಾಗಿದೆ. ಇದು 1936ರಲ್ಲಿ ಮೊದಲು ಪ್ರಕಟವಾಯಿತು. ಈ ಪುಸ್ತಕದಲ್ಲಿ ಅವರು ತಾವು ಆದಿವಾಸಿಗಳ ಬದುಕು ಸಂಸ್ಕೃತಿಗೆ ಆಕರ್ಷಿತರಾದದ್ದು ಮತ್ತು ಆದಿವಾಸಿಗಳ ಜೀವನದ ರೀತಿ-ನೀತಿಗಳು ಹಾಗೂ ಅವರ ಕಥೆ ಮತ್ತು ಐತಿಹ್ಯಗಳನ್ನು ಸಂಗ್ರಹಿಸಲು ಪ್ರಾರಂಭಿಸಿದ್ದು ಹಾಗೂ ಅವುಗಳನ್ನು ತರ್ಜುಮೆ ಮಾಡಿದ್ದು ಇವೆಲ್ಲದರ ವಿವರ ನೀಡಿದ್ದಾರೆ. ಅವರ ಸಂಗಾತಿ ಶಾಮರಾವ್ ಹಿವಳೆ ಅವರು ಗೊಂಡ ಸೇವಾ ಮಂಡಲದ ಶಾಲೆ ಮತ್ತು ಆಸ್ಪತ್ರೆಗಳ ಉಸ್ತುವಾರಿಕಾರ್ಯ ನಿರ್ವಹಿಸುತ್ತಿದ್ದರೆ, ಎಲ್ವಿನ್ ಈಗಿನ ಮಧ್ಯಪ್ರದೇಶ, ಒರಿಸ್ಸಾ, ಮಹಾರಾಷ್ಟ್ರ ಮತ್ತು ಬಿಹಾರ್‌ಗಳ ಆದಿವಾಸಿ ಪ್ರದೇಶಗಳಲ್ಲಿ ಸುತ್ತಾಡುತ್ತಿದ್ದರು. ಈ ಭೇಟಿ ಕಾಲದಲ್ಲಿ, ತಾವು ನಡೆಸಿದ ಸಂದರ್ಶನಗಳನ್ನು ಆಧರಿಸಿ ಎಲ್ವಿನ್ ತಾವು ಕಂಡ ವಿವಿಧ ಸಮುದಾಯಗಳ ಬಗ್ಗೆ ಉಪಯುಕ್ತ ಅಧ್ಯಯನಗಳನ್ನು ಧಾರಾವಾಹಿಗಳಾಗಿ ಬರೆದಿದ್ದಾರೆ. ಆದರೆ ಅವರು ಆದಿವಾಸಿಗಳ ಬಗ್ಗೆ ಕೇವಲ ವೈಜ್ಞಾನಿಕ ಆಸಕ್ತಿಯನ್ನು ಮಾತ್ರ ಹೊಂದಿದ್ದರು ಎಂದರೆ ತಪ್ಪಾಗುತ್ತದೆ. ಜಮೀನು ಮತ್ತು ಅರಣ್ಯಗಳ ಮೇಲೆ ಆದಿವಾಸಿಗಳು ಹೊಂದಿದ್ದ ಹಕ್ಕುಗಳ ಹರಣ ಹಾಗೂ ಅವರ ಸಂಸ್ಕೃತಿಯ ಮೇಲೆ ದಾಳಿ ಇವುಗಳಿಂದ ವ್ಯಥಿತರಾದ ಎಲ್ವಿನ್ ಮಧ್ಯಭಾರತದಲ್ಲಿ ಆಗ ನೆಲೆಸಿದ್ದ ಎರಡೂವರೆ ಕೋಟಿ ಆದಿವಾಸಿಗಳ ಸ್ವಯಂ ನೇಮಿತ, ಆದರೆ ಅತ್ಯಂತ ಪರಿಣಾಮಕಾರಿಯಾದ (ಆದಿವಾಸಿಗಳ) ವಕ್ತಾರರಾಗಿಬಿಟ್ಟರು. ಹಾಗೆ ನೋಡಿದರೆ, ಮುಖ್ಯವಾಗಿ ಈ ವೆರಿಯರ್ ಎಲ್ವಿನ್ ಅವರ ಪುಸ್ತಕಗಳು, ಲೇಖನಗಳು, ಉಪನ್ಯಾಸಗಳು, ಚಲನಚಿತ್ರಗಳು ಹಾಗೂ ಛಾಯಾಚಿತ್ರಗಳಿಂದ, ಭಾರತೀಯ ನಗರವಾಸಿ ನಾಗರೀಕರಿಗೆ, ತಮ್ಮ ದೇಶದವರೇ ಆದ ಆದಿನಿವಾಸಿಗಳ ಜೀವನ ಮತ್ತು ಸಮಸ್ಯೆಗಳ ಬಗ್ಗೆ ಪರಿಚಯ ಉಂಟಾಗಲು ಸಾಧ್ಯವಾಯಿತು.

1947ರ ಆಗಸ್ಟ್ ತಿಂಗಳಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ ನಂತರ, ಅವರು ತಮ್ಮ ಮನಸ್ಸು ಮತ್ತು ಹೃದಯದಲ್ಲಿ ಬಹುಕಾಲದಿಂದ ಹೊಂದಿದ್ದ ಭಾರತೀಯ ಪೌರತ್ವ ಕಾನೂನು ಬದ್ಧವಾಗಿ ಅವರದಾಯಿತು, ಇಲ್ಲಿಂದ ಮುಂದೆ, ಪ್ರಧಾನಮಂತ್ರಿ ಜವಾಹರ್ ಲಾಲ್ ನೆಹರೂ ಅವರೂ ಸೇರಿದಂತೆ ಎಲ್ವಿನ್ ಅವರನ್ನು ಮೆಚ್ಚುವವರ, ಅವರ ಬೆಂಬಲಿಗರ ಒಂದು ಸಮೂಹವೇ ಸೃಷ್ಟಿಯಾಯಿತೆನ್ನಬಹುದು. ನೆಹರೂ ಅವರ ಶಿಫಾರಸಿನ ಮೇರೆಗೆ ಈಶಾನ್ಯ ಗಡಿಯ ಪ್ರಾಂತ್ಯಕ್ಕೆ (ಈಗಿನ ಅರುಣಾಚಲ ಪ್ರದೇಶ ) ಎಲ್ವಿನ್ ಅವರನ್ನು ಆ ಪ್ರಾಂತೀಯ ಸರ್ಕಾರದ ಬುಡಕಟ್ಟು ವ್ಯವಹಾರಗಳ ಸಲಹೆಗಾರ ಎಂದು ನೇಮಿಸಲಾಯಿತು. ಈ ಕಷ್ಟಸಾಧ್ಯವಾದ ಮತ್ತು ಭಾರತದಲ್ಲಿ ಸ್ವಲ್ಪ ಮಾತ್ರ ಪರಿಚಿತವಿದ್ದ ಪ್ರದೇಶದಲ್ಲಿ ಬುಡಕಟ್ಟು ನಿವಾಸಿಗಳ ಜೀವನ ಪರಿಸ್ಥಿತಿಗಳನ್ನು ಅಧ್ಯಯನ ಮಾಡುವುದು ಮತ್ತು ಅವುಗಳಿಗೆ ಸಂಬಂಧಿಸಿದಂತೆ ನೀತಿ-ನಿಯಮಗಳನ್ನು ಕಾರ್ಯಗತಗೊಳಿಸಲು ಸರ್ಕಾರಕ್ಕೆ ಸಲಹೆ ಮಾಡುವುದು ಅವರ ಕೆಲಸವಾಗಿತ್ತು. ಮತ್ತೊಮ್ಮೆ ಅವರು ಜಮೀನು ಮತ್ತು ಅರಣ್ಯಗಳ ಮೇಲೆ ಬುಡಕಟ್ಟು ಜನಾಂಗದವರು ಹೊಂದಿರುವ ಹಕ್ಕುಗಳನ್ನು ಪ್ರತಿಪಾದಿಸುವತ್ತ ತಮ್ಮ ಗಮನ ಹರಿಸಿದರು. ಆದಿವಾಸಿಗಳಿಗೆ ಅವರು ನೀಡಿದ ಸೇವೆಗಾಗಿ ಹಾಗೂ ಭಾರತೀಯ

ಮಾನವ ವಿಜ್ಞಾನಕ್ಕೆ ಅವರು ನೀಡಿದ ಕೊಡುಗೆಯನ್ನು ಮಾನ್ಯಮಾಡಿ 1961ರಲ್ಲಿ ಎಲ್ವಿನ್ ಅವರಿಗೆ ಪದ್ಮಭೂಷಣ ಪ್ರಶಸ್ತಿ ನೀಡಲಾಯಿತು. ತಾವು ತಾಯ್ನಾಡಾಗಿ ಸ್ವೀಕರಿಸಿದ ಭಾರತದಲ್ಲೇ ಜನರ ಅಪಾರ ಪ್ರೀತಿ-ಗೌರವಗಳನ್ನು ಗಳಿಸಿದ ವೆರಿಯರ್ ಎಲ್ವಿನ್ 1964ರ ಫೆಬ್ರವರಿಯಲ್ಲಿ ನಿಧನ ಹೊಂದಿದರು.

ಎಲ್ವಿನ್ ತಮ್ಮ ಜೀವನ ಮತ್ತು ಕಾರ್ಯಸಾಧನೆಗಳ ಬಗ್ಗೆ ಅವರ ಆತ್ಮಚರಿತ್ರೆಯಲ್ಲಿ ಸುಂದರವಾಗಿ ಬರೆದಿದ್ದಾರೆ. *ದಿ ಟ್ರೈಬಲ್ ವರ್ಲ್ಡ್ ಆಫ್ ವೆರಿಯರ್ ಎಲ್ವಿನ್* ಎಂಬ ಪುಸ್ತಕವನ್ನು ಅವರು ಅಸುನೀಗುವುದಕ್ಕೂ ಮೊದಲೇ ಬರೆದು ಮುಗಿಸಿದ್ದರು. ಆದಾಗ್ಯೂ, ಆ ಪುಸ್ತಕ ಅವರ ಮರಣಾನಂತರ ಪ್ರಕಟವಾಯಿತು. ಈ ಪುಸ್ತಕ ಹಾಗೂ *ಲೀವ್ಸ್ ಫ್ರಂ ದಿ ಜಂಗಲ್* ಇವೆರಡನ್ನೂ ಇತ್ತೀಚೆಗೆ ಪುನಃ ಮುದ್ರಿಸಿ ಪ್ರಕಟಿಸಲಾಗಿದೆ. ಇವೆರಡೂ ಬಹು ಮೆಚ್ಚುಗೆ ಗಳಿಸಿವೆ.) ಎಲ್ವಿನ್ ಒಬ್ಬ ಪ್ರಚಾರಕರಾಗಿ, ಸಾಮಾಜಿಕ ಕಾರ್ಯಕರ್ತರಾಗಿ ಮಾನವಶಾಸ್ತ್ರಜ್ಞರಾಗಿ ಹಾಗೂ ಸರ್ಕಾರೀ ಅಧಿಕಾರಿಯಾಗಿಯೂ ಸೇವೆ ಸಲ್ಲಿಸಿದರು. ಆದರೆ, ಇದೆಲ್ಲದಕ್ಕಿಂತ ಹೆಚ್ಚಾಗಿ ಅವರು ಒಬ್ಬ ಬರಹಗಾರರು. ಮಾನವ ಜನಾಂಗದ ಚರಿತ್ರೆಗಳಿಂದ ಹಿಡಿದು ಕಾದಂಬರಿಗಳವರೆಗೆ, ವಿವಿಧ ಕಲೆಗಳ ಇತಿಹಾಸಗಳಿಂದ ಮೊದಲ್ಗೊಂಡು ಆತ್ಮಚರಿತ್ರೆಯ ವರೆಗೆ- ಹೀಗೆ ಅವರು 25ಕ್ಕೂ ಹೆಚ್ಚಿನ ಕೃತಿಗಳ ಲೇಖಕರೂ ಆಗಿದ್ದಾರೆ. ಅಲ್ಲದೆ, ಜಾನಪದ ಕಥೆಗಳ ಐದು ಬೃಹತ್ ಕಥಾ ಸಂಪುಟಗಳನ್ನು ಸಹ ಅವರು ಹೊರತಂದರು. ಅವುಗಳಿಂದಲೇ ಈ ಪುಸ್ತಕವನ್ನು ಸಿದ್ಧಪಡಿಸಲಾಗಿದೆ. ಅವರು ಬರೆದಿರುವ ಇತರ ಪುಸ್ತಕಗಳಲ್ಲಿಯಂತೆಯೇ ಈ ಪುಸ್ತಕದಲ್ಲಿಯೂ ಎಲ್ವಿನ್ ಬುಡಕಟ್ಟು ಜನಾಂಗದವರನ್ನು ಅರ್ಥಮಾಡಿಕೊಂಡ ರೀತಿ ಹಾಗೂ ಕಥೆಗಾರರಾಗಿ ಅವರ ಪ್ರತಿಭೆ – ಈ ಎರಡೂ ವ್ಯಕ್ತವಾಗುತ್ತವೆ.

1961ರಲ್ಲಿ ಮೊದಲು ಪ್ರಕಟವಾದ ಈ ಪುಸ್ತಕ, 1966ರಲ್ಲಿ ಮರು ಮುದ್ರಣ ಕಂಡು, ಇದೀಗ ಹೊಸ ಪೀಳಿಗೆಯ ಓದುಗರಿಗಾಗಿ ಮತ್ತೊಮ್ಮೆ ಹೊರಬರುತ್ತಿದೆ.

**- ರಾಮಚಂದ್ರ ಗುಹ**

1995 ( ಮುನ್ನುಡಿ ಅನುವಾದ: ಕೆ.ಎಂ.ಮಧ್ವರಾಯ)

# ಪ್ರಸ್ತಾವನೆ

ನಾನು ಕಳೆದ ಮೂವತ್ತು ವರುಷಗಳಿಂದಲೂ ಭಾರತದ ಗುಡ್ಡಗಾಡುಗಳಲ್ಲಿ ಪ್ರವಾಸ ಮಾಡಿ ಕಥೆಗಳನ್ನು ಸಂಗ್ರಹಿಸುತ್ತಿದ್ದೇನೆ; ಮತ್ತು ಅವುಗಳಲ್ಲಿ ಸುಮಾರು ಎರಡು ಸಾವಿರಕ್ಕೂ ಮೀರಿ ಕಥೆಗಳನ್ನು ಪ್ರಕಟಿಸಿದ್ದೇನೆ. ಈ ಚಿಕ್ಕ ಪುಸ್ತಕದಲ್ಲಿ ಕೆಲವು ಕಥೆಗಳನ್ನು ಕೂಡಿಸಿದ್ದೇನೆ. ಅವು ಪ್ರಪಂಚ ಎಳತಾಗಿದ್ದಾಗ, ಅಥವಾ ಇಂದಿಗಿಂತ ಎಳತಾಗಿದ್ದಾಗ, ಇದ್ದ ಜೀವನದ ಸ್ಥಿತಿಗತಿಗಳ ಬಗೆಗೆ ಜನಸಾಮಾನ್ಯರಲ್ಲಿರುವ ಭಾವನೆಯನ್ನು ವರ್ಣಿಸುತ್ತದೆ. ಅವುಗಳಲ್ಲಿ ಕೆಲವು ಪ್ರಪಂಚ ಹೇಗೆ ಮೊದಲಾಯಿತೆಂಬುದನ್ನೂ, ಆಗಿನ ಪ್ರಪಂಚದಲ್ಲಿದ್ದ ಆದಿಮಾನವರ ರೀತಿನೀತಿಗಳನ್ನೂ ವರ್ಣಿಸುತ್ತವೆ. ಮತ್ತೆ ಕೆಲವು – ಬೆಂಕಿಯ ಬಳಕೆ, ಮನೆಗಳ ನಿರ್ಮಾಣ, ಬಟ್ಟೆಗಳ ನೆಯ್ಗೆ, ಮುಂತಾದ – ಮಾನವ ಜೀವನದ ಹಲವು ಮೂಲಭೂತ ಅಗತ್ಯಗಳನ್ನು ಹೇಗೆ ಕಂಡುಹಿಡಿದರೆಂಬುದನ್ನು ಸೂಚಿಸುತ್ತವೆ. ಇನ್ನೂ ಕೆಲವು, ಮಾನವರೂ ಪ್ರಾಣಿಗಳೂ ಜೊತೆಯಲ್ಲಿ ಬಾಳಿ ಪರಸ್ಪರ ಸಂಭಾಷಿಸುತ್ತಿದ್ದ ಆಶ್ಚರ್ಯಕರ ದಿನಗಳನ್ನೂ, ಇಂದ್ರಜಾಲ ವಿದ್ಯೆಯ ಪ್ರಭಾವವಿನ್ನೂ ಅಚ್ಚಳಿಯದಿದ್ದ ಕಾಲದಲ್ಲಿ ಮಾನವರು ಕೈಕೊಂಡ ಅದ್ಭುತ ಸಾಹಸಗಳನ್ನೂ ಸ್ಮರಣೆಗೆ ತರುತ್ತವೆ. ಹಳೆಯ ಪ್ರಪಂಚಕ್ಕೆ ಸಾವಿನ ಪರಿಚಯವೇ ಇರಲಿಲ್ಲ; ಒಂದೆರಡು ಕಥೆಗಳು ಸಾವು ಪ್ರಪಂಚಕ್ಕೆ ಮೊತ್ತ ಮೊದಲ ಹೆಜ್ಜೆಯಿಟ್ಟದ್ದು ವೃಥಾ ದೀರ್ಘವಾಗಿ ಬೆಳೆದ ಬಾಳಿನ ಭಾರವನ್ನಿಳಿಸಿ ಸಂತೈಸುವುದಕ್ಕೇ ಹೊರತು, ಮನುಷ್ಯರನ್ನು ದುಃಖ ಪಡಿಸುವುದಕ್ಕಲ್ಲವೆಂಬುದನ್ನು ನಮಗೆ ತಿಳಿಸುತ್ತವೆ.

ನಾನು ಇದಕ್ಕೆ ಮುಂಚೆ ಬರೆದ – ಮಹಾಕೋಸಲದ ಜಾನಪದ ಕಥೆಗಳು (ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, 1944), ಮಧ್ಯ ಭಾರತದ ಕಾಲ್ಪನಿಕ ಕಥೆಗಳು (ಆ. ಯೂ. ಪ್ರೆ. 1949), ಒರಿಸ್ಸದ ಗುಡ್ಡಗಾಡು ಜನರ ಕಾಲ್ಪನಿಕ ಕಥೆಗಳು (ಆ. ಯೂ. ಪ್ರೆ 1954), ಭಾರತದ ಈಶಾನ್ಯಗಡಿಯ ಕಥೆಗಳು (ಭಾರತ ಈಶಾನ್ಯ ಗಡಿಯ ಆಡಳಿತ ಮಂಡಳಿ, 1958), ಮತ್ತು ಬೈಗರು (ಜಾನ್ ಮರ್ರೆ, 1939) ಎಂಬ ಪುಸ್ತಕಗಳಿಂದ ಇಲ್ಲಿ ಬರುವ ಕಥೆಗಳನ್ನು ಆಯ್ದುಕೊಳ್ಳಲಾಗಿದೆ. ಈ ಉಪಕಾರಕ್ಕಾಗಿ ಆ ಪುಸ್ತಕಗಳ ಪ್ರಕಾಶಕರಿಗೆ ನಾನು ಕೃತಜ್ಞ.

ಷಿಲ್ಲಾಂಗ್, -ವೆರಿಯರ್ ಎಲ್ವಿನ್

1ಡಿಸೆಂಬರ್, 1960

# ಲೋಕದ ಆದಿ

## ಪ್ರಪಂಚದ ನಿರ್ಮಾಣ

ಪ್ರಪಂಚ ಸೃಷ್ಟಿಯಾದದ್ದು ಹೇಗೆ ಎಂಬುದನ್ನು ಕುರಿತು ಭಾರತದ ಗುಡ್ಡಗಾಡುಗಳಲ್ಲಿ ಪರಪಂಪರೆಯಿಂದ ಬಂದ ಬಗೆಬಗೆಯಾದ ಅನೇಕ ಕಥೆಗಳಿವೆ. ಕೆಲವರು ಅದು ಬ್ರಹ್ಮಾಂಡದಿಂದ ಒಡೆದು ಮೂಡಿತೆಂದರೆ, ಇನ್ನು ಕೆಲವರು ಅದನ್ನು ಸಾಕ್ಷಾತ್ ದೇವರೇ ನಿರ್ಮಿಸಿದನೆನ್ನುತ್ತಾರೆ. ಆದರೆ ಆದಿಯಲ್ಲಿ ಒಂದು ಮಹಾಸಾಗರವಿತ್ತು. ಅದರ ತಳದಿಂದ ಭೂಮಿಯನ್ನೆತ್ತಿ ತಂದು – ಮಧ್ಯಭಾರತದ ರಮ್ಯಕಾನನವಾಸಿಗಳಾದ ಬೈಗರು ಇಲ್ಲಿ ವರ್ಣಿಸಿರುವಂತೆ – ಒಂದಲ್ಲ ಒಂದು ರೀತಿಯಲ್ಲಿ ನೀರಿನ ಮೇಲೆ ಹರಡಲಾಯಿತು ಎಂಬ ಭಾವನೆಗೆ ಬಹುಮತವಿದೆ.

ಆದಿಯಲ್ಲಿ ನೀರಲ್ಲದೆ ಮತ್ತೇನೂ ಇರಲಿಲ್ಲ; ನೀರು, ನೀರು, ಎಲ್ಲೆಲ್ಲೂ ನೀರು. ದೇವರ ಧ್ವನಿಯಿರಲಿಲ್ಲ; ರಾಕ್ಷಸರ ಸದ್ದಿರಲಿಲ್ಲ; ಗಾಳಿ ಇರಲಿಲ್ಲ; ಬಂಡೆಗಳಿರಲಿಲ್ಲ; ದಾರಿಗಳಿರಲಿಲ್ಲ; ಕಾಡೂ ಇರಲಿಲ್ಲ. ಈಗ ಆಕಾಶ ಇರುವಂತೆ ಆಗ ನೀರಿತ್ತು. ಅತ್ತಿತ್ತ ತೇಲುವ ಪದ್ಮಪತ್ರದ ಮೇಲೆ ಮಹಾದೇವ ಸುಖಾಸೀನನಾಗಿದ್ದನು. ಅವನ ಜೊತೆಗೆ ಒಂದು ಹಣ್ಣಾಗಲಿ ಹೂವಾಗಲಿ ಇರಲಿಲ್ಲ; ಒಂಟಿಯಾಗಿದ್ದನು. ಹಾಗೆಯೇ ಒಂದು ದಿನ ಅವನು ತನ್ನ ತೋಳನ್ನು ತಿಕ್ಕಿ ತೆಗೆದ ಕೊಳೆಯಿಂದ ತನ್ನ ಮಗಳಾದ ಕಾಗೆಯನ್ನು ನಿರ್ಮಿಸಿದನು. ಅದು ಮೈತುಂಬಿ ಹಾರಾಡುವಷ್ಟು ದೊಡ್ಡದಾದಾಗ ಅವನು ಅದನ್ನು ಕುರಿತು, 'ಹೋಗು, ನನಗಾಗಿ ಒಂದಿಷ್ಟು ನೆಲವನ್ನು ಹುಡುಕು; ನಾನಿಲ್ಲಿ ಒಂಟಿಯಾಗಿದ್ದೇನೆ; ಪ್ರಪಂಚವನ್ನು ನಿರ್ಮಿಸುವ ಅಪೇಕ್ಷೆ ನನಗಿದೆ' ಎಂದನು.

ಕಾಗೆ ಹಾರಿತು, ಹಾರಿತು, ಹಾರಿತು; ಎಲ್ಲಿ ಹೋಯಿತೋ ಬಲ್ಲವರಾರು? ಕಡೆಗೆ ಅದರ ಉಸಿರು ಹಾರಿಹೋಯಿತು. ಅದು ಸಾಗರದ ತಳಕ್ಕೆ ಒಂದು ತೋಳನ್ನೂ, ಗಗನದೆತ್ತರಕ್ಕೆ ಇನ್ನೊಂದು ತೋಳನ್ನೂ ನೀಡಿ ನೀರಿನಲ್ಲಿ ಕುಳಿತಿದ್ದ ಆಮೆಯ ಬೆನ್ನಮೇಲೆ ದಢೀರೆಂದು ಬಿದ್ದಿತು.

ಆಮೆ ಕೇಳಿತು: 'ಏಕೆ ಹೀಗೆ ಏದುತ್ತಿರುವೆ? ಏನು ಸಮಾಚಾರ?'

'ಅಣ್ಣ, ನನಗೆ ತುಂಬಾ ಆಯಾಸವಾಗಿದೆ. ನನ್ನ ಜೀವವೇ ಹಾರಿಹೋಗುವಂತೆ ತೋರುತ್ತಿದೆ.'

'ತಂಗಿ, ನೀನೆಲ್ಲಿಗೆ ಹೊರಟಿರುವೆ?'

'ನಾನು ನೆಲವನ್ನು ಹುಡುಕುತ್ತಿದ್ದೇನೆ. ಅದೆಲ್ಲಿದೆ ಹೇಳುವೆಯಾ?'



'ಸಾಗರದ ತಳದಲ್ಲಿ ಒಂದು ಕ್ರಿಮಿ ಇದೆ; ನೀನು ಹೋಗಿ ಅದನ್ನು ಹುಡುಕು. ಆ ಕ್ರಿಮಿಯೇ ನೆಲವನ್ನು ನುಂಗಿ ಕುಳಿತಿರುವುದು. ನಾನು ಲೋಹಾಧಿಪತಿಯ ಬಳಿಗೆ ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ಅವನು ನಿನಗೆ ಸಹಾಯ ಮಾಡುತ್ತಾನೆ.'

ಅದರಂತೆ ಆಮೆ ಕಾಗೆಯನ್ನು ಲೋಹಾಧಿಪತಿಯ ಬಳಿಗೆ ಕರೆದುಕೊಂಡು ಹೋಯಿತು. ಅವನು ಕಬ್ಬಿಣದ ಕೆಲಸಮಾಡುವ ಲೋಹಾಸುರರೆಂಬ ಹನ್ನೆರಡುಮಂದಿ ಸೋದರರಿಗೂ, ತಾಮ್ರದ ಕೆಲಸಮಾಡುವ ತಾಮ್ರಾಸುರರೆಂಬ ಹದಿಮೂರು ಸೋದರರಿಗೂ, ಬೆಂಕಿಯಲ್ಲಿ ಕೆಲಸ ಮಾಡುವ ಅಗ್ನ್ಯಸುರರೆಂಬ ಹದಿನಾಲ್ವರು ಸೋದರರಿಗೂ ಹೇಳಿ ಕಳಿಸಿದನು. ಎಲ್ಲರೂ ಸೇರಿ ಕಿಟಕಿಗಳುಳ್ಳ ಒಂದು ದೊಡ್ಡ ಕಬ್ಬಿಣದ ಪಂಜರವನ್ನು ಮಾಡಿದರು. ಆಮೆಯೂ

ಕಾಗೆಯೂ ಪಂಜರದೊಳಕ್ಕೆ ಹೋದವು. ಲೋಹಾಧಿಪತಿ ಅವರಿಬ್ಬರನ್ನೂ ಸಾಗರದ ತಳಕ್ಕೆ ಇಳಿಯಬಿಟ್ಟನು. ಅವರಿಗೊಂದು ಸರಪಳಿಯನ್ನು ಕೊಟ್ಟು, 'ನಿಮ್ಮ ಕೆಲಸ ಮುಗಿದು ನೀವು ಸಿದ್ಧವಾದ ಕೂಡಲೇ ಇದನ್ನೆಳೆಯಿರಿ, ನಾನು ನಿಮ್ಮನ್ನು ಮೇಲಕ್ಕೆ ಎಳೆದುಕೊಳ್ಳುತ್ತೇನೆ' ಎಂದನು.

ಕ್ರಿಮಿ ನಿದ್ರಿಸುತ್ತಿತ್ತು; ಪಂಜರ ಅದರ ತಲೆಯ ಹತ್ತಿರಕ್ಕೆ ಇಳಿಯಿತು. ಆಮೆಯೂ ಕಾಗೆಯೂ ಹೊರಗೆ ಬಂದು ಅದನ್ನು ಎಬ್ಬಿಸಿದುವು. ಅದು ತುಂಬಾ ಕೋಪದಿಂದ 'ನಾನು ಹನ್ನೆರಡು ವರುಷಗಳಿಂದ ಮಲಗಿ ನಿದ್ರಿಸುತ್ತಿದ್ದೆ; ನನ್ನನ್ನು ಎಬ್ಬಿಸಿಬಿಟ್ಟರಿ, ಸರಿ. ನನಗೆ ತುಂಬಾ ಹಸಿವು, ಇಷ್ಟು ಕಾಲವೂ ನನಗೆ ತಿನ್ನಲು ಏನೂ ಇರಲಿಲ್ಲ. ಈಗ ನಾನು ನಿಮ್ಮಿಬ್ಬರನ್ನೂ ತಿಂದು ಸೊಗಸಾಗಿ ಪಾರಣೆಮಾಡುತ್ತೇನೆ' ಎಂದು ಕಿರಿಚಿತು.

ಇದನ್ನು ಕೇಳಿ ಆಮೆ ಕಾಗೆಯ ಬೆನ್ನ ಹಿಂದೆ ಸರಿಯಿತು.

ಕ್ರಿಮಿ ಕೇಳಿತು, 'ನೀನು ಯಾರ ಮಗಳು?'

'ನಾನು ಸಾಕ್ಷಾತ್ ದೇವರ ಮಗಳು.'

'ಇಲ್ಲಿಗೇಕೆ ಬಂದೆ ನೀನು?'

'ನೆಲವನ್ನು ಹುಡುಕಿ ಪಡೆಯುವುದಕ್ಕೆ.'

'ನೀನು ಬಂದು ಎತ್ತಿಕೊಂಡು ಹೋಗಲೆಂದು ನಿಮ್ಮಪ್ಪನೇನು ಇಲ್ಲಿ ಭೂಮಿಯನ್ನು ತಂದುಹಾಕಿದ್ದಾನೆಯೇ?'

ಇದನ್ನು ಕೇಳಿದಾಗ ಕಾಗೆ ಮಿತಿಮೀರಿದ ಕೋಪದಿಂದ ಉತ್ತರಕೊಟ್ಟಿತು: 'ನೀನು ನನಗೆ ಭೂಮಿಯನ್ನು ಕೊಡದೆಹೋದರೆ ನಿನಗೆ ತಕ್ಕ ಶಾಸ್ತಿ ಮಾಡುತ್ತೇನೆ.'

ಕ್ರಿಮಿ ಹೆದರಿತು; 'ಮಗಳೆ, ನೆಲ ಇಲ್ಲಿಲ್ಲ; ಅಗೊ! ಅಲ್ಲೆಲ್ಲೋ ಇದೆ. ಅದನ್ನೊಬ್ಬ ರಾಕ್ಷಸ ಕಾಯುತ್ತಿದ್ದಾನೆ. ನೀನು ಅವನ ಬಳಿಗೆ ಹೋದರೆ ನಿನ್ನನ್ನು ಸುಟ್ಟು ಬೂದಿ ಮಾಡುತ್ತಾನೆ' ಎಂದಿತು.

ಆಮೆಗೆ ಈ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಕ್ರಿಮಿ ಹೆದರುತ್ತಿರುವುದನ್ನು ಕಂಡು ತನ್ನ ಭೀತಿಯನ್ನು ಮರೆತು ಕಾಗೆಯ ಬೆನ್ನ ಮರೆಯಿಂದ ಹಾರಿಬಂದು ಕ್ರಿಮಿಯ ಕುತ್ತಿಗೆಯನ್ನು ಹಿಡಿದುಕೊಂಡಿತು.

'ಈ ಕೂಡಲೆ ನನಗೆ ನೆಲವನ್ನು ಕೊಡು. ಇಲ್ಲವಾದರೆ ನಾನು ನಿನ್ನ ತಲೆಯನ್ನು ಕಡಿದುಹಾಕುತ್ತೇನೆ' ಎಂದು ಅಬ್ಬರಿಸಿತು.

ಹಾಗೆ ಹೇಳುತ್ತಲೇ ಅದರ ಕುತ್ತಿಗೆಯನ್ನು ಹಿಸುಕತೊಡಗಿತು. ಕ್ರಿಮಿ ಹೊರಳಿ ವಿಲಿವಿಲಿ ಒದ್ದಾಡಿ ಅರಚಿಕೊಂಡಿತು: 'ಮಗು, ಮಗು, ಒಂದು ಕ್ಷಣ ತಾಳು.' ಆಮೇಲೆ ಕಕ್ಕತೊಡಗಿತು. ಇಪ್ಪತ್ತೊಂದು ಸಲ ಕಕ್ಕಿತು. ಒಂದೊಂದು ಸಲವೂ ಗಜ್ಜುಗದ ಕಾಯಿ ಗಾತ್ರದ ಒಂದಿಷ್ಟು ಮಣ್ಣು ಈಚೆಗೆ ಬಿತ್ತು.

ಅದರ ಮೊದಲ ವಮನದಿಂದ ಭೂಮಾತೆ ಹುಟ್ಟಿದಳು; ಎರಡನೆಯದರಿಂದ ಹಳದಿಮಣ್ಣು ಹುಟ್ಟಿತು; ಮೂರನೆಯದರಿಂದ ಕಪ್ಪುಮಣ್ಣು; ನಾಲ್ಕನೆಯದರಿಂದ ನಿನ್ನನ್ನು ಕೊಲ್ಲಬಲ್ಲ ಹುಲಿ ಅಡ್ಡಾಡುವ ಪಾಪದ ಮಣ್ಣು; ಐದನೆಯದರಿಂದ ಬಿತ್ತಿದ್ದೆಲ್ಲ

ನಿಷ್ಫಲವಾಗುವ ಬರಡುಮಣ್ಣು; ಆರನೆಯದರಿಂದ ಕೊಳೆಯಾದ ಮಣ್ಣು; ಏಳನೆಯದರಿಂದ ಯಾರೂ ಈ ತನಕ ಮುಟ್ಟರದ ಮಣ್ಣು; ಎಂಟನೆಯದರಿಂದ ಹಾಲಿನಂತೆ ಬೆಳ್ಳಗಿರುವ ಮಣ್ಣು; ಒಂಭತ್ತನೆಯದರಿಂದ ಒಳ್ಳೆಯಮಣ್ಣು; ಹತ್ತನೆಯದರಿಂದ ಅಲ್ಲಾಡುವ ಮಣ್ಣು; ಹನ್ನೊಂದನೆಯದರಿಂದ ಬೆರಕೆ ಮಣ್ಣು; ಹನ್ನೆರಡನೆಯದರಿಂದ ಕೆಮ್ಮಣ್ಣು; ಹದಿಮೂರನೆ ಯದರಿಂದ ಬತ್ತಲೆ ಮಣ್ಣು; ಹದಿನಾಲ್ಕನೆಯದರಿಂದ ಬಿಳಿ ಜೇಡಿಮಣ್ಣು; ಹದಿನೈದನೆಯದ ರಿಂದ ಕಲ್ಲುಮಣ್ಣು; ಹದಿನಾರನೆಯದರಿಂದ ಕೆಂಪು ಕಂಕರ ಮಣ್ಣು; ಹದಿನೇಳನೆಯದರಿಂದ ಮರಳು ತುಂಬಿದ ಮಣ್ಣು; ಹದಿನೆಂಟನೆಯದರಿಂದ ಕಿವುಡು ಮಣ್ಣು; ಹತ್ತೊಂಭತ್ತನೆಯದ ರಿಂದ ಬೆಳೆ ಕೊಡುವ ಫಲವತ್ತಾದ ಮಣ್ಣು; ಇಪ್ಪತ್ತನೆಯದರಿಂದ ಏನೂ ಬೆಳೆಯದ ಮಣ್ಣು; ಮತ್ತು ಇಪ್ಪತ್ತೊಂದನೆಯದರಿಂದ ತಾಜಾ ಮಣ್ಣು.

ಇವೆಲ್ಲವನ್ನೂ ಕ್ರಿಮಿ ಕಾಗೆಗೆ ಕೊಟ್ಟಿತು. ಆನಂತರ ಆಮೆ ಸರಪಳಿಯನ್ನು ಜಗ್ಗಿತು. ಲೋಹಾಧಿಪತಿ ಪಂಜರವನ್ನು ಮೇಲಕ್ಕೆ ಎಳೆದುಕೊಂಡನು. ಆಮೆ ಒಂದು ತುಂಡು ಹಗ್ಗದಿಂದ ನೆಲವನ್ನು ಕಾಗೆಯ ಕೊರಳ ಸುತ್ತ ಕಟ್ಟಿತು. ಕಾಗೆ ಹಾರಿತು, ಹಾರಿತು, ಹಾರಿತು ದಣಿದು ಸತ್ತು ಸುಣ್ಣವಾಗಿ ಕಡೆಗೆ ದೇವರ ಬಳಿಗೆ ಬಂತು.

ಅದನ್ನು ನೋಡುತ್ತಲೇ ದೇವರು, 'ಮಗು ನೆಲವನ್ನು ತಂದಿರುವೆಯಾ?' ಎಂದನು.

'ಹೌದಪ್ಪ, ತಂದಿದ್ದೇನೆ.'

ಆಗ ದೇವರು ಅದರ ಕೊರಳ ಸುತ್ತ ಬಿಗಿದಿದ್ದ ನೆಲವನ್ನು ಬಿಡಿಸಿಕೊಂಡು ತನ್ನ ತೊಡೆಯ ಮೇಲಿಟ್ಟುಕೊಂಡನು. ಎಳೆವಯಸ್ಸಿನ ಕನ್ಯೆಯೊಬ್ಬಳನ್ನು ಕರೆದು, ಅವಳ ಕೈಯಿಂದ ಹಸಿರೆಲೆಗಳ ಪಾತ್ರೆಯೊಂದನ್ನು ಮಾಡಿಸಿ ಅದರಲ್ಲಿ ಮಣ್ಣನ್ನು ಹಾಕಿದನು. ಅವಳು ಅದನ್ನು ಕಡೆದಳು. ಅದಷ್ಟೂ ಹದವಾಗುವ ತನಕ ಎಂಟು ಹಗಲು ಒಂಭತ್ತು ರಾತ್ರಿಗಳುದ್ದಕ್ಕೂ ಕಡೆದಳು. ಆಗ ದೇವರು ನೆಲವನ್ನು ಒಂದು ತೆಳುವಾದ ದೋಸೆಯ ಆಕಾರಕ್ಕೆ ತಟ್ಟಿ ನೀರ ಮೇಲೆ ಹರಡಿದನು. ಅದು ಬೆಳೆದು, ಬೆಳೆದು, ನೀರ ಮೇಲು-ಮೈಯಷ್ಟನ್ನೂ ಮುಚ್ಚಿ ಕೊಂಡಿತು.

ಆದರೆ ಇದು ಇನ್ನೂ ಗಟ್ಟಿಯಾಗಿರಲಿಲ್ಲ; ಅವರು ಅದರ ಮೇಲೆ ನಿಲ್ಲಲು ಯತ್ನಿಸಿದಾಗೆಲ್ಲಾ ದೂರ ಓಡುತ್ತಿತ್ತು; ಮಳೆಗಾಲದ ಕೆಸರಿನಂತೆ, ಕಾಲಿಟ್ಟರೆ ಜಾರಿಕೆ

ಕಡೆಗೆ ದೇವರು ತನ್ನ ಮಗಳಾದ ಕಾಗೆಯ ಮೂಲಕ ಪವನದೇವ (ಪವನ ದಾಸೆರಿ)ನಿಗೂ ಭೀಮಸೇನನಿಗೂ ಹೇಳಿ ಕಳಿಸಿದನು. ದೇವರು ತನ್ನ ಬಾಯ ಉಸುರಿನಿಂದ ಸೃಷ್ಟಿಸಿದ ಪವನದೇವ ಆತುರಾತುರವಾಗಿ ಮೊದಲು ಹಾರಿಬಂದನು. ಅವನು ನೆಲದ ಮೇಲೆ ಬೀಸಿ ಅದರಲ್ಲಿ ಸ್ವಲ್ಪಭಾಗವನ್ನು ಆಕಾಶಕ್ಕೆ ತೂರಿ, ಎಲ್ಲವನ್ನೂ ಒಟ್ಟಿಗೆ ಬೆರೆಸಿ ಅದು ಗಟ್ಟಿಯಾಗಿ ದೃಢವಾಗುವ ತನಕ ಊದಿದನು. ಆದರೆ ಗಾಳಿ ಕುರುಡು; ಅದಕ್ಕೇ ಅದು ಯಾವಾಗಲೂ ಎಲ್ಲದರ ಮೈಮೇಲೂ ಬೀಳುತ್ತದೆ. ಜನರನ್ನು ಗುದ್ದುತ್ತದೆ. ಆದ್ದರಿಂದ ಅದು ಮಾಡಿದ ಕೆಲಸ ನೇರವಾಗಲಿಲ್ಲ. ನೆಲ ಗಟ್ಟಿಯಾಯಿತು. ನಿಜ; ಆದರೆ ಅದರ ಒಂದು ಪಕ್ಕದ ಮೇಲೆ ನಿಂತಾಗ ಇನ್ನೊಂದು ಪಕ್ಕ ಮೇಲೇಳುತ್ತಿತ್ತು.

ಆ ಸಮಯಕ್ಕೆ ಮಹಾದೈತ್ಯ ಭೀಮಸೇನ ಒಂದೇ ದಾಟಿನಲ್ಲಿ ಬಂದನು. ಅವನ ಒಂದು ಹೆಜ್ಜೆ ತನ್ನ ಮನೆಯಲ್ಲಿತ್ತು, ಇನ್ನೊಂದು ದೇವರ ಬಳಿಗೆ ಬಂದಿತ್ತು. ಅವನಿಗೆ ಎದ್ದ

ಆಯಾಸವಾಗಿತ್ತು. ಎಲ್ಲಕ್ಕೂ ಮೊದಲು ತನಗೆ ಏನಾದರೂ ತಿನ್ನಲು ಕೊಡಬೇಕೆಂದನು. ದೇವರು ಅವನಿಗೆ ಇಪ್ಪತ್ತೈದು ಮೂಟೆ ಅಕ್ಕಿಯನ್ನೂ ಹನ್ನೆರಡು ಮೂಟೆ ಬೇಳೆಯನ್ನೂ ಕೊಟ್ಟನು. ಅವನು ಅಷ್ಟನ್ನೂ ತಿಂದು ಮುಗಿಸಿ 'ಇದು ಏನೂ ಸಾಲದು; ನನಗೆ ಇನ್ನೂ ಬೇಕು' ಎಂದನು . ಆಗ ಅವನಿಗೆ ಹನ್ನೆರಡು ಮೂಟೆ ಹುರುಳಿಯನ್ನು ಒದಗಿಸಿದರು. ಅದನ್ನೂ ತಿಂದು ಮುಗಿಸಿ ಅವನು 'ದೊಡ್ಡಪ್ಪ, ನನಗೆ ಕುಡಿಯಲು ಏನನ್ನೂ ಕೊಡಲಿಲ್ಲವಲ್ಲ!' ಎಂದನು.

'ನೀನೇ ಹೋಗಿ ಸ್ವಲ್ಪ ಮದ್ಯವನ್ನು ಹುಡುಕಿ ತಾ' ಎಂದನು ದೇವರು.

'ಏನು ಅದು!' ಎಂದನು ಭೀಮಸೇನ.

'ಹೋಗಿ ನೋಡು' ಎಂದನು ದೇವರು

ಭೀಮಸೇನ ಅಡವಿಗೆ ಹೋಗಿ ಹುಡುಕಿದ್ದೂ ಹುಡುಕಿದ್ದೇ. ಎಷ್ಟೋ ದಿನದ ಮೇಲೆ ಅವನಿಗೆ ಒಂದು ಮಹುಲಿ ಮರ ಸಿಕ್ಕಿತು; ಅದು ಟೊಳ್ಳು ಮರ. ಅದರ ಬಿರುಕಿನ ತುಂಬ ಮದ್ಯವಿತ್ತು. ರೆಂಬೆಗಳ ಮೇಲೆಲ್ಲ ಹಸಿರು ಪಾರಿವಾಳಗಳು, ನೀಲಿಗೊರಳ ಹಕ್ಕಿಗಳು, ಗಿಳಿ ಕಾಗೆ ಮೈನಾ ಮುಂತಾಗಿ ಎಲ್ಲ ಜಾತಿಯ ಹಕ್ಕಿಗಳೂ ಮದ್ಯವನ್ನು ಕುಡಿಯುತ್ತಾ ಕುಳಿತಿದ್ದವು; ತಲೆದೂಗುತ್ತಿದ್ದವು. ಅವೇಕೆ ತಮ್ಮ ತಲೆಗಳನ್ನು ಹಾಗೆ ಹಾಕುತ್ತಿವೆ ಎಂದು ಭೀಮಸೇನನಿಗೆ ಯೋಚನೆ. ಅವನು ಆದರೂ ಮರವನ್ನು ನೋಡಲು ಹತ್ತಿದನು. ಅಲ್ಲಿ ಬಿರುಕಿನ ತುಂಬಾ ಮದ್ಯವಿತ್ತು ತನ್ನ ಕೈಯನ್ನು ಅದ್ದಿ ರುಚಿ ನೋಡಿದನು.

'ಇದು ಮದ್ಯ! ಇದು ಮದ್ಯ!' ಎಂದು ಕೂಗಿಕೊಳ್ಳುತ್ತಾ ಕುಡಿಯ ತೊಡಗಿದನು. ಹೊಟ್ಟೆ ತುಂಬಿದ ಕೂಡಲೇ ಅವನ ತಲೆಯೂ ತೂಗಲು ಮೊದಲಾಯಿತು. ಹಕ್ಕಿಗಳ ಪಕ್ಕದಲ್ಲಿ ಕುಳಿತನು ಅವೂ ಒಟ್ಟಿಗೆ ತಲೆಯಲ್ಲಾಡಿಸಿದವು.

ಅನಂತರ ಅವನು ದೇವರಿಗೆಂದು ಹನ್ನೆರಡು ಬುರುಡೆಗಳಲ್ಲಿ ಮದ್ಯವನ್ನು ತುಂಬಿಕೊಂಡು ತಂದನು ದೇವರೂ, ಪವನನೂ, ಕಾಗೆಯೂ ದೊನ್ನೆಗಳಲ್ಲಿ ತುಂಬಿಕೊಂಡು ಕುಡಿದರು. ಅವರ ತಲೆಗಳೂ ಅಲ್ಲಾಡತೊಡಗಿದಾಗ ಭೀಮಸೇನ ಮೇಲೆದ್ದು ಭೂ ಪ್ರದಕ್ಷಿಣೆ ಮಾಡಿದನು.

ಅದು ತೆಳ್ಳಗಿದ್ದ ಕಡೆ ಒಂದು ಬೆಟ್ಟವನ್ನು ಇರಿಸಿದನು ಬಹಳ ಭಾರವಾಗಿದ್ದ ಕಡೆ ಕಣಿವೆಯನ್ನು ತೋಡಿದನು. ಜಾರುತ್ತಿದ್ದ ಬಳಿ ಮರಗಳನ್ನು ನೆಟ್ಟು ಅವು ಮಣ್ಣನ್ನು ಬಿಗಿಹಿಡಿಯುವಂತೆ ಮಾಡಿದನು. ಆಗಲೂ ನೆಲ ಭದ್ರವಾಗಿಯೂ, ಸ್ಥಿಮಿತವಾಗಿಯೂ ಇರಲಿಲ್ಲ ಅದು ಇನ್ನೂ ತೂಗಾಡುತ್ತಲೇ ಇತ್ತು ಬೆದರಿ ಅಸಮವಾಗಿ ಛಿದ್ರವಾದ ಜೇಡನ ಬಲೆಯಂತಿತ್ತು.

ಐದು ವರುಷ ಕಳೆಯಿತು. ಅನಂತರ ನಂಗ–ಬೈಗನೂ ಅವನ ಮಡದಿಯೂ ನೆಲದ ಒಂದು ಬಿರುಕಿನಿಂದ ಹುಟ್ಟಿಬಂದರು. 'ತಾಯೆ, ನನ್ನ ಪಿಟೀಲೆಲ್ಲಿ' ಎಂದು ನಂಗ–ಬೈಗ ಭೂಮಾತೆಯನ್ನು ಕೇಳಿದನು.

'ಮಗು, ನೀನಿನ್ನೂ ಪೊಕ್ಕಳು ಹುರಿ ಮಾತ್ರ ಆಗಿದ್ದೀಯೆ. ನಿನಗೆ ಪಿಟೀಲಿನ ಅಗತ್ಯವೇನು?'' ಎಂದಳವಳು.

ಆದರೆ ಅದೇ ದಿನ ಬಿದಿರು–ಕನ್ಯೆ ಹುಟ್ಟಿದಳು. ನಂಗ–ಬೈಗ ಒಂದೇ ಉಸಿರಿನಲ್ಲಿ ಮೇಲೂ

ಕೆಳಗೂ ಬಿದಿರನ್ನು ಕೊಯ್ಯಲು ಹೊರಟನು. ತಂತಿಗಳಿಗೆ ಬದಲಾಗಿ ತನ್ನ ಕೂದಲನ್ನೇ ಕಟ್ಟಿ ಅವನು ಒಂದು ಪಿಟೀಲನ್ನು ಮಾಡಿಕೊಂಡು ಬಾರಿಸಿದನು. ಅದರ ನಾದದಿಂದ ದೇವರ ಪೀಠವೇ ಅಲ್ಲಾಡಿತು. ಬೈಗರು ಹುಟ್ಟಿದರು ಎಂಬುದು ದೇವರಿಗೆ ತಿಳಿದು, ತನ್ನ ಬಳಿಗೆ ಬರುವಂತೆ ಅವರಿಗೆ ಹೇಳಿ ಕಳಿಸಿದನು. ಕರೆಯಲು ಬಂದ ದೂತ ನಂಗ-ಬೈಗ ಕೇರುವ ಮೊರದಲ್ಲಿ ಮಲಗಿ ನಿದ್ರಿಸುತ್ತಿರುವುದನ್ನು ಕಂಡನು. ಭೂಮಾತೆ, 'ಮಗು, ಹೋಗಬೇಡ' ಎಂದಳು. ಆದರೆ ಹಸುವಿನಂತೆ ಬತ್ತಲೆಯಾಗಿದ್ದ ಚಿಕ್ಕ ಹುಡುಗ ಪಿಟೀಲನ್ನು ಹಿಡಿದು ಹೊರಟುಹೋದನು. 'ನಿನ್ನ ಉಗುರುಗಳನ್ನು ನೆಲದೊಳಗೆ ಊರಿ ಅದು ಅಲುಗಾಡದಂತೆ ಮಾಡು' ಎಂದು ದೇವರು ಅವನಿಗೆ ಅಪ್ಪಣೆ ಮಾಡಿದನು. ನಂಗ ಬೈಗನಿಗೆ ಉಗುರು ಬೆಳೆದಿರಲಿಲ್ಲ; ತನ್ನ ಬಲಗೈ ಕಿರುಬೆರಳನ್ನು ಕತ್ತರಿಸಿ ನೆಲದೊಳಗೆ ನೆಟ್ಟನು. ಅದರಿಂದ ದೇವರಿಗೆ ತೃಪ್ತಿಯಾಗಲಿಲ್ಲ; 'ನನಗೆ ಬಲವಾದ ಕಂಬಗಳು ಬೇಕು' ಎಂದನು.

ನಂಗ-ಬೈಗ ಅಗ್ನ್ಯಸುರನನ್ನು ಕರೆದು ಪೂಜಿಸಿದನು. ಅವನು ಮಹಾಜ್ವಾಲೆಗಳನ್ನು ಎರಚುತ್ತಾ ಪ್ರತ್ಯಕ್ಷನಾದನು. ಬೆಂಕಿಯಿಂದ ಕಮ್ಮಾರ ಆಗೇರಿಯ ಹುಟ್ಟಿದನು. ಬೆಂಕಿಯಿಂದಲೇ ಬಂದವನಾದ್ದರಿಂದ ಅವನಿಗೆ ಅದರ ಭಯವಿರಲಿಲ್ಲ. ಕಾದು ಬಿರಿಯುವ ಕಬ್ಬಿಣವನ್ನು ತನ್ನ ಬರಿಗೈಗಳಿಂದಲೇ ಕುಟ್ಟಿ ಸಲಾಕಿಗಳನ್ನು ಮಾಡಿಕೊಳ್ಳುವುದು ಅವನಿಗೆ ಸಾಧ್ಯವಿತ್ತು. ಅವನು ಶುದ್ಧ ಕಬ್ಬಿಣದಿಂದಲೇ ಹನ್ನೆರಡು ಕಂಬಗಳನ್ನು ನಿರ್ಮಿಸಿ ಪ್ರಪಂಚದ ನಾಲ್ಕೂ ಮೂಲೆಗಳಲ್ಲಿ ನಿಲ್ಲಿಸಿದನು. ಪ್ರಪಂಚ ಸ್ಥಿರವಾಗಿ ನಿಂತಿತು. ದೇವರು ಎಲ್ಲೆಲ್ಲೂ ಬತ್ತವನ್ನು ಚೆಲ್ಲಿದನು. ಭೂಮಿ ರೂಪುಗೊಂಡಿತು.

## ಸೂರ್ಯ ಚಂದ್ರ

ನಮ್ಮ ಮುಂದಿನ ಕಥೆಗಾಗಿ ನಾವು ವಿಶಾಲ ಭಾರತವನ್ನು ನೇರ ದಾಟಿ, ಈಶಾನ್ಯದ ಗಡಿಯ ಮಹಾಪರ್ವತಗಳಿಗೆ ಹೋಗೋಣ.

ಗುಡ್ಡಗಾಡಿನ ಜನರಲ್ಲಿ ಅನೇಕರು ಸೂರ್ಯ, ಚಂದ್ರರನ್ನು ದೇವತೆಗಳೆಂದು ಭಾವಿಸುತ್ತಾರೆ. ಇನ್ನಷ್ಟು ವಿಚಿತ್ರವೇನೆಂದರೆ ಸಿಯಾಂಗ್ ನದಿಯ ಎಡದಂಡೆಯ ಮೇಲೆ ನೆಲಸಿರುವ ಮಿನಿಯಾಂಗರು ಹೇಳುವ ಈ ಕೆಳಗಣ ಕಥೆಯ ಪ್ರಕಾರ ಸೂರ್ಯ ಹೆಣ್ಣಿಂತೆ, ಚಂದ್ರ ಅವಳ ಗಂಡನಂತೆ.

ಭೂಮಿ ಹೆಣ್ಣು, ಆಕಾಶ ಗಂಡು. ಇವರಿಗೆ ಮದುವೆಯಾಯಿತು. ಆಗ ಭೂತಗಳೂ ಮನುಷ್ಯರೂ ಪ್ರಾಣಿಗಳೂ ಸಭೆ ಸೇರಿ ಇವರಿಬ್ಬರ ನಡುವೆ ಸಿಕ್ಕಿ ನಾಶವಾಗದಿರಲು ಏನು ಮಾಡಬೇಕೆಂಬುದನ್ನು ಆಲೋಚಿಸಿದರು. ಮಹಾ ಭೂತಗಳಲ್ಲಿ ಎಲ್ಲರಿಗಿಂತ ಶ್ರೇಷ್ಠನಾದ ಸೇದಿ-ದಿಯೊರ್ ಆಕಾಶನನ್ನು ಹಿಡಿದು ಚೆನ್ನಾಗಿ ಥಳಿಸಿ ಅವನು ಭೂಮಿಯನ್ನು ಹಿಂದೆ ಬಿಟ್ಟು ಗಗನಾಂತರಾಳಕ್ಕೆ ಓಡಿಹೋಗುವಂತೆ ಮಾಡಿದನು. ಅವನು ದೂರ ಸರಿಯು ತ್ತಿರುವಾಗಲೇ ಭೂಮಿ ಹೆಣ್ಣು ಮಕ್ಕಳಿಬ್ಬರನ್ನು ಹಡೆದಳು. ಗಂಡನನ್ನು ಕಳೆದುಕೊಂಡ

ವ್ಯಥೆಯಲ್ಲಿ ಭೂಮಿಗೆ ತನ್ನ ಮಕ್ಕಳನ್ನು ಕಣ್ಣೆತ್ತಿ ನೋಡುವುದು ಕೂಡ ದುಸ್ಸಹವಾಯಿತು. ಆಗ ಸೇದಿ-ದಿಯೊರ್ ಆ ಮಕ್ಕಳನ್ನು ಸಾಕಲು ದಾದಿಯೊಬ್ಬಳನ್ನು ಹವಣಿಸ ಬೇಕಾಯಿತು.

ಮಕ್ಕಳು; ಅವುಗಳಿಗೆ ಕಾಲು ಬಂತು. ಅವುಗಳ ಮೈಯಿಂದ ಬೆಳಕು ಹೊಳೆಯ ತೊಡಗಿತು. ದಿನಕ್ರಮೇಣ ಬೆಳಗು ಉಜ್ವಲವಾಗುತ್ತಾ ಬಂತು. ಸ್ವಲ್ಪ ಕಾಲದಲ್ಲೇ ದಾದಿಯು ಕಣ್ಮುಚ್ಚಿಕೊಂಡಳು. ಸೇದಿ-ದಿಯೊರ್ ಅವಳನ್ನು ನೆಲದಲ್ಲಿ ಹೂತನು. ತಮ್ಮ ತಾಯೇ ಸತ್ತಿದ್ದರೆ ಹೇಗೋ ಹಾಗೆ ಮಕ್ಕಳೂ ಅತ್ತು ಅತ್ತು ಸತ್ತು ಹೋದವು. ಅವುಗಳ ಆ ಬೆಳಕೂ ನಂದಿ ಹೋಯಿತು.

ಮತ್ತೆ ಕತ್ತಲಾಯಿತು. ಭೂತಗಳಿಗೂ, ಮನುಷ್ಯರಿಗೂ, ಪ್ರಾಣಿಗಳಿಗೂ ಭಯವಾಯಿತು. 'ಆ ದಾದಿ ಈ ಮಕ್ಕಳ ವಶದಲ್ಲಿದ್ದ ಏನನ್ನೋ ಕದ್ದುಬಿಟ್ಟಿರಬೇಕು. ಅದೇ ಇವು ಅಷ್ಟು ಅತ್ತದ್ದಕ್ಕೆ ಕಾರಣ' ಎಂದು ತಿಳಿದ ಭೂತಗಳು ಅವಳ ಹೆಣವನ್ನು ಅಗೆದು ತೆಗೆದು ನೋಡಿದವು; ಕಣ್ಣುಗಳ ಹೊರತು ಉಳಿದ ಭಾಗವೆಲ್ಲ ಕೊಳೆತು ಹೋಗಿತ್ತು. ದೊಡ್ಡ ಕಣ್ಣುಗಳು ಕತ್ತಲೆಯಲ್ಲಿ ಹೊಳೆಯುತ್ತಿರುವುದನ್ನೂ, ಅವುಗಳಲ್ಲಿ ತಮ್ಮ ಪ್ರತಿಬಿಂಬ ಕನ್ನಡಿಸಿರುವುದನ್ನೂ ಕಂಡ ಭೂತಗಳು 'ಸತ್ತ ಮಕ್ಕಳು ಇಲ್ಲಿ ಬದುಕಿವೆ,' ಎಂದು ಕೊಂಡವು. ಆ ಕಣ್ಣುಗಳನ್ನು ಒಂದು ಹೊಳೆಗೆ ತೆಗೆದುಕೊಂಡು ಹೋಗಿ ಐದು ಹಗಲು ಐದು ರಾತ್ರಿಗಳ ಕಾಲ ತೊಳೆದು ಚೆನ್ನಾಗಿ ಹೊಳೆಯುವಂತೆ ಮಾಡಿದವು. ಆದರೆ ಆ ಕಣ್ಣುಗಳಲ್ಲಿ ನೆಲಸಿ ತಮ್ಮನ್ನೇ ನೋಡುತ್ತಿದ್ದ ಬಿಂಬಗಳನ್ನು ಮಾತ್ರ ತೊಡೆಯುವುದು ಸಾಧ್ಯವಾಗಲಿಲ್ಲ.

ಭೂತಗಳು ಬಡಗಿಯೊಬ್ಬನನ್ನು ಬರಮಾಡಿಕೊಂಡವು. ಅವನು ತುಂಬಾ ಎಚ್ಚರಿಕೆಯಿಂದ ಆ ಕಣ್ಣುಗಳನ್ನು ಕತ್ತರಿಸಿ ಬಿಡಿಸಿ ಅಲ್ಲಿದ್ದ ಪ್ರತಿಬಿಂಬಗಳನ್ನು ತೆಗೆದು ಹಾಕಿದನು. ಅವು ಜೀವಂತ ಮಕ್ಕಳಾದವು. ಒಬ್ಬಳಿಗೆ ಸೇದಿ-ಇರ್ಕಾಂಗ್-ಬೋಮಾಂಗ್ ಎಂದೂ, ಇನ್ನೊಬ್ಬಳಿಗೆ ಸೇದಿ-ಇರ್ಕಾಂಗ್-ಬಾಂಗ್ ಎಂದು ಹೆಸರಿಟ್ಟು ಇಬ್ಬರನ್ನೂ ತಮ್ಮ ಮನೆಯೊಳಗೆ ಭದ್ರವಾಗಿ ಇಟ್ಟುಕೊಂಡವು.

ಹುಡುಗಿಯರು ಪ್ರಾಪ್ತ ವಯಸ್ಕರಾದ ಮೇಲೆ ಒಂದು ದಿನ ಬೋಮಾಂಗ್ ಚಿತ್ತಾಕರ್ಷಕವಾದ ಬಣ್ಣಬಣ್ಣದ ವಸ್ತ್ರಗಳನ್ನೂ ಅನೇಕ ಒಡವೆಗಳನ್ನೂ ತೊಟ್ಟು ತನ್ನ ಚೆಲುವನ್ನು ಚಿಮ್ಮುತ್ತಾ ಲೋಕ ಸಂಚಾರಕ್ಕೆ ಹೊರಟಳು. ಅವಳು ಮನೆಯನ್ನು ಬಿಟ್ಟು ಬಂದಳೋ ಇಲ್ಲವೋ ಅವಳ ಸುತ್ತಲೂ ತೇಜಸ್ಸು ತುಳುಕಿತು; ಹಗಲಾಯಿತು. ಬೆಟ್ಟಗಳನ್ನು ದಾಟಿದಳು . ಮನೆಗೆ ಹಿಂದಿರುಗಲಿಲ್ಲ.

ಬಹುಕಾಲದ ಮೇಲೆ ತಂಗಿ ಬಾಂಗ್ ಅಕ್ಕನನ್ನು ಹುಡುಕಲೆಂದು ಅವಳ ಹೆಜ್ಜೆ ಗುರುತನ್ನೇ ಅನುಸರಿಸಿ ಹೊರಟಳು. ಅವಳು ಎಲ್ಲೆಲ್ಲಿ ಹೊರಟಳು ಅಲ್ಲೆಲ್ಲ ಅವಳ ಕಾಂತಿಯಿಂದ ಬಂಡೆಗಳು ಬಿರಿದವು. ಮರಗಳು ಬಾಡಿದವು. ಧಗೆಗೆ ಜನ ಬಳಲಿ ಕಂಗೆಟ್ಟರು.

ಆಗ ಭೂತಗಳೂ ಮನುಷ್ಯರೂ ಪ್ರಾಣಿಗಳೂ ಮತ್ತೊಮ್ಮೆ ಸಭೆಸೇರಿ ಈ ಸೋದರಿಯರಲ್ಲಿ ಒಬ್ಬಳನ್ನು ಕೊಲ್ಲುವುದೊಂದೇ ಮಾರ್ಗವೆಂದು ತೀರ್ಮಾನಿಸಿದರು. ಆದರೆ ಆ ಕೆಲಸವನ್ನು ಮಾಡಲು ಯಾರಿಗೂ ಧೈರ್ಯವಿರಲಿಲ್ಲ; ದೀರ್ಘ ಚರ್ಚೆ ನಡೆಯಿತು. ಕೊನೆಗೆ ಕಪ್ಪೆಯೊಂದು ಮಾತ್ರ ಹಾಗೆ ಮಾಡಲು ಒಪ್ಪಿತು. ಅದು ಬಿಲ್ಲನ್ನು ಹಿಡಿದು ದಾರಿಯಲ್ಲಿ



ಕುಳಿತು ಹುಡುಗಿಯ ಬರವನ್ನು ಇದಿರು ನೋಡುತ್ತಿತ್ತು. ಬಾಂಗ್ ತನ್ನ ಚೆಲುವು ಬೆಳಕನ್ನು ಚೆಲ್ಲುತ್ತ ಅಲ್ಲಿಗೆ ಬಂದ ಕೂಡಲೆ ಅವಳ ಎರಡು ಪಕ್ಕೆಗಳಿಗೂ ಒಂದೊಂದು ಬಾಣವನ್ನು ಬಿಟ್ಟು ಕೊಂದುಹಾಕಿತು. ಆಮೇಲೆ ಬಿಸಿಲಿನ ಕಾವು ಅಡಗಿತು; ಬೆಳಕು ಕಣ್ಣನ್ನು ಕೋರೈಸುವುದು ತಪ್ಪಿತು. ತರುಗಳಿಗೆ ಹೋದ ಜೀವ ಬಂತು. ಮನುಷ್ಯರು ಹಾಯಾಗಿ ತಮ್ಮ ಕೆಲಸಗಳಲ್ಲಿ ತೊಡಗಿದರು.

ಹುಡುಗಿಯ ದೇಹವಾದರೋ ಬಿದ್ದ ಸ್ಥಳದಲ್ಲಿಯೇ ಬಿದ್ದಿತ್ತು. ಇತ್ತತ್ತ ಸುಳಿದು ಬಂದ ಇಲಿ ಅದನ್ನು ನೋಡಿತು. ಅದು ಹೆಣವನ್ನು ಹೊತ್ತು ಬೋಮಾಂಗಳ ಬಳಿಗೆ ಹೊರಟಿತು ದಾರಿಯಲ್ಲಿ ಜಾರಿಬಿತ್ತು (ಫಲವಾಗಿ ಅಂದಿನಿಂದಲೂ ಇಲಿಯ ಕಾಲು ಡೊಂಕಾಗಿಯೇ

ಇದೆ.) ಆದರೂ ಮೇಲೆದ್ದು, ಬೋಮಾಂಗ್ ದಾಟಿ ಹೋಗಬೇಕಾಗಿದ್ದ ಒಂದು ಹೊಳೆಯ ತೀರಕ್ಕೆ ಹೆಣವನ್ನು ತಂದಿಳಿಸಿತು ತಂಗಿಯನ್ನು ಕಂಡು ಅಕ್ಕ ದುಃಖ ಪಟ್ಟಳು. ಅತ್ತಳು; ತನ್ನನ್ನೂ ಹೀಗೆಯೇ ಕೊಂದಾರೆಂದು ಭಯಪಟ್ಟಳು. ಯಾರಿಗೂ ತಿಳಿಯದ ದಾರಿಯೊಂದನ್ನು ಹಿಡಿದು ಹೊರಟಳು; ಅಲ್ಲಿ ತಲೆಯ ಮೇಲೊಂದು ಕಲ್ಲನ್ನು ಇಟ್ಟುಕೊಂಡು ಕುಳಿತುಬಿಟ್ಟಳು. ಆ ಕಲ್ಲಿನ ನೆರಳಿನಿಂದ ಪ್ರಪಂಚ ಮತ್ತೆ ಕತ್ತಲಾಯಿತು.

ಇದನ್ನು ಕಂಡು ಭೂತಗಳಿಗೂ ಮನುಷ್ಯರಿಗೂ. ಪ್ರಾಣಿಗಳಿಗೂ ಮತ್ತೆ ಭಯವಾಯಿತು. ಬೆಳಕನ್ನು ಹುಡುಕಿಕೊಂಡು ಎಲ್ಲರೂ ಹೊರಟರು. ಬಹುಕಾಲ ಅವರಿಗೆ ಏನೂ ಸಿಕ್ಕಲಿಲ್ಲ. ಆಗ ಅವರು ಇಲಿಯನ್ನೂ, ಕಾಡು ಹಕ್ಕಿಯನ್ನೂ, ಹುಂಜವನ್ನು ಹಿಡಿದುಕೊಂಡು ತಪ್ಪಿಸಿಕೊಂಡಿರುವ ಹುಡುಗಿಯನ್ನು ಹುಡುಕಿ ತರಲು ಕಳಿಸಿದರು.

ಇಲಿಯೂ ಕಾಡುಹಕ್ಕಿಯೂ ತಮ್ಮ ಕೆಲಸದ ಮೇಲೆ ಹೊರಟುಹೋದವು. ಹುಂಜ ಮಾತ್ರ ಬಹು ತಾಳ್ಮೆಯಿಂದ ಹುಡುಕುತ್ತಾ ಹೋಗಿ ಕಡೆಗೆ ಬೋಮಾರಿಗಳನ್ನು ಕಂಡುಹಿಡಿಯಿತು; ಹಿಂದಿರುಗಬೇಕೆಂದು ಬೇಡಿಕೊಂಡಿತು. 'ನನ್ನ ತಂಗಿಯನ್ನು ಅವರು ಕೊಂದರು. ನನ್ನನ್ನೂ ಕೊಲ್ಲುತ್ತಾರೆ; ಆದ್ದರಿಂದ ನಾನು ಬರುವುದಿಲ್ಲ. ಅವರು ತಂಗಿಯನ್ನು ಬದುಕಿಸಿದರೆ ಮಾತ್ರ ನಾನು ಬರುತ್ತೇನೆ ಎಂದು ಅವರಿಗೆ ತಿಳಿಸು' ಎಂದಳು. ಬೋಮಾಂಗ್ ಹುಂಜ ಈ ಉತ್ತರವನ್ನು ಇತರರಿಗೆ ತಿಳಿಸಿತು. ಅವರು ಒಬ್ಬ ಬಡಗಿಗೆ ಹೇಳಿಕಳಿಸಿದರು. ಅವನು ಬಂದು ಕಣ್ಣಿಗೆ ಸೌಮ್ಯವಾಗಿರುವಷ್ಟೇ ಬೆಳಕನ್ನು ಹೊಮ್ಮಿಸಲೆಂದು ಬಾಂಗಳ ದೇಹವನ್ನು ಚಿಕ್ಕ ಅಳತೆಗೆ ಇಳಿಸಿಕೊಂಡು ಅದಕ್ಕೆ ಜೀವ ತುಂಬಿದನು. ತನ್ನ ತಂಗಿ ಮತ್ತೆ ಬದುಕಿದ್ದನ್ನು ಕೇಳಿ ಅಕ್ಕ ಬೋಮಾಂಗ್ ತಲೆಯ ಮೇಲಿದ್ದ ಕಲ್ಲನ್ನು ಕೆಳಗೆ ಹಾಕಿ ಎದ್ದು ನಿಂತಳು. ಹಗಲು ಮರಳಿತು; ಬೆಳಕು ಜ್ವಲಿಸುತ್ತದ್ದಂತೆ ಹುಂಜ 'ಕೊ ಕೊ ಕೊ ಕೊ–ಕೊ ಕೊ ಕೊ ಕೊ' ಎಂದಿತು; ಕಾಡುಹಕ್ಕಿ 'ಪೆಂಗೊ–ಪೆಂಗೊ' ಎಂದು ಹಾಡಿತು; ಇಲಿ 'ಟಕ್ ಟಕ್ ಟಕ್ ಟಕ್' ಎಂದು ಕುಂಯ್‌ಗುಟ್ಟಿತು. ಬೆಳಕೂ, ಕಾವೂ ಬಂದದ್ದನ್ನು ಕಂಡು ಅವಕ್ಕೆಲ್ಲ ಸಂತೋಷವಾಯಿತು.

# ಗಗನ ನರ್ತಕಿಯರು

ಜೋಗಿ ಝೋರಿಯವಿಗೆ ಏಳು ಹೆಣ್ಣು ಮಕ್ಕಳು. ಅವರೆಲ್ಲ ಕನ್ಯೆಯರು, ಋಷಿ ಸ್ವಭಾವದವರು, ಚೆಲುವೆಯರು. ವಾರ್ಷಿಕ ಮಹೋತ್ಸವದ ಸಮಯದಲ್ಲಿ ಒಂದು ದಿನ ಅವರು ಇತರ ಹಳ್ಳಿಯ ಹೆಣ್ಣುಗಳೊಂದಿಗೆ ಕುಣಿದರು; ಕುಣಿಯುತ್ತಾ ಕುಣಿಯುತ್ತಾ ಹರ್ಷ ಮದ ವಾಯಿತು. ಮದ್ದಳೆ ಬಾರಿಸುವ ತರುಣರೊಂದಿಗೆ ಕುಣಿಯುತ್ತಾ ಇದ್ದ ಹಾಗೆ, ಗಿಡುಗ ಬಂದು ಹಾರಿಸಿಕೊಂಡು ಹೋದಂತೆ, ಅವರು ಆಕಾಶಕ್ಕೆ ಏರಿಹೋದರು; ಆಕಾಶದಲ್ಲಿ ಏರಿ ಹೋದರು. ಆಕಾಶದಲ್ಲಿ ಕುಣಿಯುತ್ತಾ ಕುಣಿಯುತ್ತಾ ಅವರು ಮೇಘದೇವನ ಬಳಿಗೆ ಹೋದರು. ಅವರ ನೃತ್ಯವನ್ನು ನೋಡಿ ಅವನಿಗೆ ಅಪರಿಮಿತ ಸಂತೋಷವಾಯಿತು. ಭೂಮಿಗೆ ಹಿಂದಿರುಗಲು ಅವರನ್ನು ಬಿಡಲೊಲ್ಲದೆ ಅವನು,'ನಾನು ಭೂಮಿಯ ಮೇಲೆ



ಮಳೆ ಕರೆದಾಗ ನೀವು ಗಗನ ಮಾರ್ಗದಲ್ಲಿ ನರ್ತಿಸಿ, ಈ ಹುಡುಗರು ಮದ್ದಳೆ ಬಾರಿಸಲಿ' ಎಂದನು. ಹುಡುಗಿಯರನ್ನು ಮಿಂಚೆಂದೂ, ಹುಡುಗರನ್ನು ಗುಡುಗೆಂದೂ ಕರೆದನು.

ಇದು ಒರಿಸ್ಸದಿಂದ ಬಂದ ಕಥೆ; ಭಾರತದ ಈಶಾನ್ಯ ಪ್ರದೇಶದಲ್ಲಿ ವಾಸಿಸುತ್ತಿರುವ ನೋಕ್ಟೆ ಜನರಲ್ಲಿ ಇನ್ನೊಂದು ಕಲ್ಪನೆ ಇದೆ.

ಇಬ್ಬರು ಸೋದರರು; ಅಣ್ಣನ ಮನೆ ಭೂಮಿಯಲ್ಲಿ, ತಮ್ಮನ ಮನೆ ಆಕಾಶದಲ್ಲಿ. ಮೇಲಿಂದ ಮೇಲೆ ತಮ್ಮ ಕುಣಿಯುತ್ತಾನೆ. ಮಳೆಯ ಧಾರೆಗಳನ್ನು ಕರೆಯುತ್ತಾನೆ. ಆಗ ಅವನು ಭೂಲೋಕದ ಮೋಹನಾಂಗಿಯರನ್ನು ಕೇಳುತ್ತಾನೆ: 'ತೊಡಲು ನಿಮಗೆ ಇಂಥಾ ಚೆಲುವಿನ ಮಣಿಗಳು ಎಂದಾದರೂ ಲಭಿಸಿದ್ದವೆ?' ಕೆಲವು ಬಾರಿ ಮಿಂಚನ್ನು ಎಸೆದು ಕೇಳುತ್ತಾನೆ: 'ಭೂಲೋಕವಾಸಿಗಳಲ್ಲಿ ಇಂಥಾ ವಿಸ್ಮಯಕರವಾದ ಶಕ್ತಿ ಇದೆಯೆ?' ಕೆಲವು ಬಾರಿ ಅವನು ಮದ್ದಳೆ ಬಾರಿಸುತ್ತಾನೆ;ಅದು ಗಗನಮಾರ್ಗದಲ್ಲಿ ಗುಡುಗಿದಾಗ ಅವನು ಭೂಲೋಕವಾಸಿಗಳನ್ನು ಕೇಳುತ್ತಾನೆ: 'ಇದಕ್ಕೆ ಸಮನಾದ ಸಂಗೀತ ನಿಮ್ಮಲ್ಲಿದೆಯೆ?'

ಆದರೆ ಮಿಷ್ಮಿ ಜನರು ಇಷ್ಟು ಭಾವನಾವಶರಲ್ಲ. ಮೋಡಗಳು ಗಾಳಿಯ ಹಂದಿಗಳೆನ್ನುತ್ತಾರೆ ಅವರು. ಗಗನದಲ್ಲಿ ಅಡ್ಡಲಾಗಿ ದೊಡ್ಡ ಸರಪಳಿಗಳಿಂದ ಕಟ್ಟಿದ ಒಂದು ದಾರಿಯುಂಟು; ಮುಗಿಲ ಹಂದಿಗಳು ಅದರ ಮೇಲೆ ಅಡ್ಡಾಡುತ್ತವೆ. ಎರಡು ಹಂದಿಗಳು ಸೇರಿದಾಗ ಕಾಳಗ ನಡೆಯುತ್ತದೆ. ಆಗ ಮುಳ್ಳು ಮುಳ್ಳಿಗೆ ತಿಕ್ಕಿ ಮಿಂಚು ಹುಟ್ಟಿ ಭೂಮಿಯ ಸುತ್ತಲೂ ಹೊಳೆಯುತ್ತದೆ. ಕಾದಾಡುವಾಗ ಹಂದಿಗಳು ಗಟ್ಟಿಯಾಗಿ ಮುಲುಕುತ್ತವೆ. ನಮಗೆ ಕೇಳಿಸುವ ಆ ಶಬ್ದವೇ ಗುಡುಗು.

## ಕಾಮನಬಿಲ್ಲು

ಜಲಶಕ್ತಿಗಳು ನಾಲ್ವರು : ಲುಕಾಪ್ಫೊರ್ ಬಣ್ಣ ಬಿಳುಪು; ಲುನಾಕ್ಪುದು ಕಪ್ಪು; ಲುಸಿಪ್ಫೊರ್ದು ಹಳದಿ; ಲುಮಾಪ್ಫೊರ್ದು ಕೆಂಪು. ಅವರ ವಾಸ ಚಿಲುಮೆಗಳಲ್ಲಿ. ಸೌಂದರ್ಯದಲ್ಲಿ ತಮಗೆ ಸಮಾನರಾದ ಮಡದಿಯರನ್ನು ಹುಡುಕುತ್ತಾ ನಿರಂತರವೂ ಆಕಾಶದಲ್ಲಿ ಅಲೆಯುತ್ತಾರೆ. ಅವರು ಓಡಾಡುವ ದಾರಿಯೇ ಕಾಮನಬಿಲ್ಲು. ಅವರು ಅದನ್ನು ದಾಟುವಾಗ ಸ್ವಲ್ಪ ಮಳೆ ಬೀಳುತ್ತದೆ. ತಮ್ಮ ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳಲು ಅವರು ಸೇವಿಸುವ ಟೀ ಸಾರಾಯಿಗಳೇ ಮಳೆ.

## ಹಸಿದ ಮಕ್ಕಳು

ಬಲುಹಿಂದೆ ಫಾಂಗ್‌ಲಾಂಗ್ರ ಪರ್ವತಗಳಲ್ಲಿ ಸೋದರರಿಬ್ಬರು ತಮ್ಮ ಮಡದಿಯೊಂದಿಗೆ ವಾಸಿಸುತ್ತಿದ್ದರು. ಅವರಿಗೆ ಮನೆತುಂಬಾ ಮಕ್ಕಳು; ಅನ್ನವಿರಲಿಲ್ಲ. ಆಗೊಂದು ದಿನ ಎರಡು ಕುಟುಂಬಗಳವರೂ ಮಕ್ಕಳನ್ನು ಕಟ್ಟಿಕೊಂಡು ಬೆಟ್ಟವನ್ನು ಹತ್ತಿಹೋದರು; ಅಲ್ಲೂ ಅವರಿಗೆ ಅನ್ನ ಸಿಕ್ಕಲಿಲ್ಲ. ಹತಾಶರಾಗಿ ಮಕ್ಕಳನ್ನು ಅಲ್ಲಿಯೇ ತೊರೆದು ಹೊರಟು ಹೋದರು. ಮಕ್ಕಳು ಆಕಾಶದೆಡೆಗೆ ಮುಖವೆತ್ತಿ ಹಸಿವೆಂದು ಅತ್ತವು.

ಆ ಮಕ್ಕಳ ರೋದನ ಬಲುಮೇಲೆ ಮೋಡಗಳ ಮರೆಯಲ್ಲಿ ರಾಶಿಗಟ್ಟಲೆ ಅನ್ನವನ್ನು ಕೂಡಿಟ್ಟುಕೊಂಡಿದ್ದ ಲುಜುಪು ಮತ್ತು ಜಸುಜು ದೇವತೆಗಳ ಕಿವಿಗೆ ಬಿತ್ತು. ಅವರು ಅನ್ನವನ್ನು ಕೆಳಗೆ ಚೆಲ್ಲಿದರು. ಅದು ಹಿಮವಾಗಿ ಭೂಮಿಗೆ ಬಿತ್ತು.

## ಮೊದಲ ನದಿಗಳು

ಬ್ರಹ್ಮಪುತ್ರಾ ನದಿ ಸೂರ್ಯನ ಸೋದರಿ. ಸೂರ್ಯ ಅದೃಷ್ಟಶಾಲಿ ಎನ್ನಬೇಕು. ಏಕೆಂದರೆ, ಅವನ ಸಂಚಾರ ಆಕಾಶದಲ್ಲಿ; ಅವನ ದಾರಿಯಲ್ಲಿ ಯಾವ ಅಡ್ಡಿ ತಡೆಗಳು ಇಲ್ಲ; ಅವನು ಸ್ವೇಚ್ಛೆಯಾಗಿ ಅಡ್ಡಾಡಬಲ್ಲನು. ಬ್ರಹ್ಮಪುತ್ರಾ ನದಿಗಾದರೋ ಮೊದಲ ದಿನಗಳಲ್ಲಿ ನೆಲದ ಮೇಲೆ ಹೆಜ್ಜೆಯಿಡುವುದೇ ದುಸ್ತರವಾಗಿತ್ತು. ಆ ಕಾಲದಲ್ಲಿ ಅದು ಪ್ರಪಂಚದ ಸೀಮಾ ರೇಖೆಯ ಕಟ್ಟಕಡೆಯಲ್ಲಿರುವ ನಿಂತುಬ್ರಂ ಮಹಾ ಸರೋವರದಲ್ಲಿ ನೆಲಸಿತ್ತು. ಆಗ ಪ್ರಪಂಚದ ಇತರ ಭಾಗಗಳಲ್ಲಿ ನೀರೇ ಇರಲಿಲ್ಲ. ಜಲಕ್ಷಾಮದಿಂದ ಜನ ಜಂತುಗಳ ಬದುಕು ಕಂಗೆಟ್ಟಿತ್ತು.

ಬಾಯಾರಿದ ಕ್ರಿಮಿ ಅಲ್ಲಿಗೆ ನೀರಿಗಾಗಿ ಬಂತು. ಒಂದು ಸಣ್ಣ ಕಾಲುವೆಯನ್ನು ತೋಡಿತು; ಅದರ ಮೂಲಕ ಒಂದು ತೊಟ್ಟು ನೀರು ಹರಿಯಿತು. ಅದನ್ನು ಕಂಡ ಕಾಡುಬೆಕ್ಕು ಆ ನೀರಿಗೆ ಬಾಯಿ ಹಾಕಿತು. ಇದ್ದದ್ದೇ ಸ್ವಲ್ಪ ನೀರು; ಅದೂ ಕೆಸರಾಗಿತ್ತು. ಆಗ ಅದು ನಿಂತುಬ್ರಂ ಸರೋವರಕ್ಕೆ ಹೋಗಿ, ಒಂದು ದೊಡ್ಡ ಕಾಲುವೆಯನ್ನು ತೋಡಿ, ತನ್ನ ಇಷ್ಟಪೂರ್ತಿ ನೀರು ಕುಡಿದು ಹೊರಟುಹೋಯಿತು. ಬ್ರಹ್ಮಪುತ್ರಾ ಆ ಬೆಕ್ಕನ್ನು ಹಿಂಬಾಲಿಸಿ ನಾಡ ಮೇಲೆ ಹರಿಯತೊಡಗಿತು.

ಈ ದೃಶ್ಯ ದ್ರಾಕುಬ್ ದೇವತೆಯ ಕಣ್ಣಿಗೆ ಬಿತ್ತು. ಇದನ್ನು ತಡೆಯಲು ಅವನು ಧಾವಿಸಿ ಬಂದನು; ಒಂದು ಕುಕ್ಕೆಯ ತುಂಬ ಮಣ್ಣನ್ನು ತಂದುಹಾಕಿ ದಾರಿಗೆ ಅಡ್ಡಲಾಗಿ ಒಂದು ಗೋಡೆಯನ್ನು ಕಟ್ಟಿದನು. ಚೈನ್ಯಿ ಇನ್ನೊಬ್ಬ ದೇವತೆ, ಜನಜೀವನಕ್ಕೆ ಆಧಾರವಾದ ನೀರನ್ನು ಹೀಗೆ ಅವನು ಕಿತ್ತುಕೊಂಡ ಸುದ್ದಿ ಚೈನ್ಯಿಯ ಕಿವಿಗೆ ಬಿತ್ತು; ಚೈನ್ಯಿಗೆ ಸಿಟ್ಟುಬಂತು ಅವನು

ದ್ರಾಕುಬನ ಬಳಿಗೆ ಹೋಗಿ 'ಸೋದರನೆ, ನೀನು ಅದ್ಭುತವನ್ನೆಸಗಿರುವೆ. ಪ್ರಪಂಚವನ್ನು ನಿರ್ಮಿಸಿದ ನೀನು ಈಗ ಬ್ರಹ್ಮಪುತ್ರಾ ನದಿಯನ್ನು ತಡೆ ಹಿಡಿದಿರುವೆ. ನೀನು ಮಾಡುವುದೆಲ್ಲಾ ಒಳ್ಳೆಯದೇ. ಆದರೆ ನಾನೀಗ ನಿನಗೊಂದು ಕೆಟ್ಟ ಸುದ್ದಿಯನ್ನು ತಂದಿದ್ದೇನೆ. ನಿನ್ನ ಮನೆಯಲ್ಲೇ ಅನಾಹುತವಾಗಿದೆ. ನಿನ್ನ ಹೆಂಡತಿ ಸತ್ತು ಹೋದಳು. ಮೊದಲು ಅಲ್ಲಿಗೆ ಹೋಗಿ ವಿಚಾರಮಾಡು' ಎಂದನು.

ದ್ರಾಕುಬ್ ಉತ್ತರಿಸಿದ: 'ಅದಾವ ದೊಡ್ಡ ವಿಷಯ. ಒಬ್ಬಳು ಸತ್ತರೆ ನಾನು ಸಾವಿರ ಹೆಂಡಿರನ್ನು ತರಬಲ್ಲೆ.'

ತನ್ನ ಮಾತಿಗೆ ಮರುಳಾಗಿ ದ್ರಾಕುಬ್ ಮನೆಗೆ ಹಿಂದಿರುಗುವನೆಂದೂ, ಅವನನ್ನು ಕಳಿಸಿ ತಾನು ಕಟ್ಟೆಯನ್ನು ಒಡೆದು ಹಾಕಬಹುದೆಂದೂ ನಂಬಿಕೊಂಡಿದ್ದ ಚೈನ್ನಿಗೆ ಅವನ ಉತ್ತರದಿಂದ ನಿರಾಶೆಯಾಯಿತು.

ಆದರೂ ಅವನು ಇನ್ನೊಂದು ಹಂಚಿಕೆಯನ್ನು ಹೂಡಿದನು. ಈಸಲ ಹೇಳಿದ: 'ಇನ್ನೂ ಹೆಚ್ಚಿನ ದುಃಖದ ಸುದ್ದಿಯನ್ನು ತಂದಿದ್ದೇನೆ, ಕೇಳು. ನಿನ್ನ ಮಗ ಸತ್ತು ಹೋದ'

ದ್ರಾಕುಬ್ ಉತ್ತರಿಸಿದ: 'ಅದೂ ದೊಡ್ಡ ವಿಷಯವಲ್ಲ. ಒಬ್ಬ ಮಗ ಸತ್ತರೆ ಸಾವಿರ ಮಕ್ಕಳನ್ನು ಪಡೆಯಬಲ್ಲೆ.'

ಚೈನ್ನಿಗೆ ಮತ್ತೆ ನಿರಾಶೆಯಾಯಿತು. ಆದರೆ ಲೋಕಜೀವನದ ಬಗೆಗೆ ಅವನಿಗೆ ಮರುಕ ಹುಟ್ಟಿತ್ತು. 'ಪಾಪ! ನೀರಿಲ್ಲದೆ ಅವರು ಬದುಕುವುದಾದರೂ ಹೇಗೆ!' ಎಂದು ಆತಂಕಪಟ್ಟನು. ಮತ್ತೆ ದ್ರಾಕುಬನ ಬಳಿಗೆ ಹಿಂದಿರುಗಿ ಇನ್ನೊಂದು ಮಾತೆಸೆದನು: 'ನಿನ್ನ ಹೆಂಡತಿ ಸತ್ತಿದ್ದಾಳೆ, ಎಂದೆ; ಅದು ಸಣ್ಣ ವಿಷಯವಾಯಿತು. ನಿನ್ನ ಮಗ ಸತ್ತಿದ್ದಾನೆ, ಎಂದೆ; ಅದೂ ಸಣ್ಣ ವಿಷಯವೇ, ಸರಿ. ನಿನ್ನ ತಾಯಿ ಸಾಯುತ್ತಿದ್ದಾಳೆ, ಈಗ.'

ದ್ರಾಕುಬ್ ಅಂದುಕೊಂಡ: 'ನನಗೆ ಬೇಕಾದಷ್ಟು ಮಂದಿ ಹೆಂಡಿರೂ ಮಕ್ಕಳೂ ಸಿಕ್ಕಬಹುದು, ನಿಜ. ಆದರೆ ಇನ್ನೊಬ್ಬಳು ತಾಯಿ ನನಗೆಲ್ಲಿ ಸಿಕ್ಕುತ್ತಾಳೆ? ನಾನು ಈಗಲೇ ಹೋಗಬೇಕು. ಅವಳನ್ನು ನೋಡಬೇಕು.' ತಾನು ಮಾಡುತ್ತಿದ್ದ ಕೆಲಸವನ್ನು ಅಲ್ಲಿಗೇ ನಿಲ್ಲಿಸಿ ಅವನು ಹೊರಟುಹೋದನು.

ಅವನು ಹೊರಟು ಹೋಗುವುದನ್ನೇ ಕಾದಿದ್ದ ಚೈನ್ನಿ ಆಕ್ಷಣವೇ ಕಟ್ಟೆಯನ್ನು ಒಡೆದು ಹಾಕಿದನು. ಆಗ ಬ್ರಹ್ಮಪುತ್ರಾನದಿ ಪರ್ವತ ಮಾರ್ಗದಲ್ಲಿ ಧುಮುಕಿ ಬಳಸಿ ಅಸ್ಸಾಮಿನ ಬಯಲಿನತ್ತ ಹರಿಯತೊಡಗಿತು. ಅದು ಹರಿದ ಬಳಿ ಜನಜಂತುಗಳು ಬದುಕಿಕೊಂಡವು. ಈಶಾನ್ಯ ಭಾರತದ ಇಡುಮಿಷ್ಮಿಗಳು ಈ ಕಥೆಯನ್ನು ಹೇಳುತ್ತಾರೆ. ನದಿಗಳನ್ನು ಕುರಿತು ಒರಿಸ್ಸದ ಕಮರರು ಹೇಳುವ ಇನ್ನೊಂದು ಕಥೆಯಿದೆ.

ಬಹುಕಾಲದ ಹಿಂದೆ ಒಬ್ಬಾನೊಬ್ಬ ಮನುಷ್ಯನಿದ್ದನು. ಅವನಿಗೆ ಒಬ್ಬಳು ಹೆಂಡತಿ ಮತ್ತು ಒಬ್ಬನೇ ಮಗ ಇದ್ದರು. ಒಂದು ದಿನ ಆ ಹುಡುಗನಿಗೆ ಕಾಹಿಲೆಯಾಯಿತು. ಅವರು ಗಾಬರಿಗೊಂಡರು. ಔಷಧ ಉಪಚಾರ ನಡೆಯಿತು; ದೇವರಿಗೆ ಆಡುಗಳನ್ನೂ ಪಾರಿವಾಳಗಳನ್ನೂ ಬಲಿಕೊಟ್ಟದ್ದಾಯಿತು. ಕಡೆಗೆ ಆ ಮುದುಕ ಇಲ್ಲಲ್ಲಿ ಹುಡುಕಿ ಒಬ್ಬ ಹೆಸರಾಂತ ಮಂತ್ರವಾದಿಯನ್ನು ಮನೆಗೆ ಕರೆದು ತಂದನು.

ಅವರು ಮನೆಗೆ ತಲಪುವಷ್ಟರಲ್ಲೇ ಹುಡುಗನ ಜೀವ ಹಾರಿಹೋಯಿತು. ಪಕ್ಕದಲ್ಲೇ ಏಕಾಂಗಿಯಾಗಿ ಕುಳಿತಿದ್ದ ತಾಯಿ ಗಟ್ಟಿಯಾಗಿ ಅಳುತ್ತಿದ್ದಳು. ಅವಳು ಎಷ್ಟು ಅತ್ತಳೆಂದರೆ ಕಣ್ಣೀರು ಹೊಳೆಯಾಗಿ ಹರಿಯತೊಡಗಿತು. ಇದ್ದ ಒಬ್ಬನೇ ಮಗ ಇಲ್ಲವಾಗಿದ್ದನು. ಅವಳ ರೋದನ ಹೆಚ್ಚಿದಂತೆಲ್ಲ ಹೊಳೆ ತುಂಬಿ ಹರಿಯಿತು.

ತಂದೆ ಮಂತ್ರವಾದಿಯೊಂದಿಗೆ ಮನೆಯ ಬಳಿಗೆ ಬಂದಾಗ, ಉಕ್ಕಿ ಬರುವ ನೀರಿನ ಪ್ರವಾಹದಿಂದ ದಾರಿ ಕಟ್ಟಿಹೋಗಿತ್ತು. ಅವನಿಗೆ ಹೆದರಿಕೆಯಾಯಿತು. 'ನಾನು ಮನೆ ಬಿಟ್ಟಾಗ ಇಲ್ಲಿ ಯಾವ ಹೊಳೆಯೂ ಇರಲಿಲ್ಲ. ಈ ನಡುವೆ ಏನೋ ನಡೆದಿರಬೇಕು' ಎಂದು ಕೊಂಡನು; ಮಂತ್ರವಾದಿಯನ್ನು ಕುರಿತು 'ಅಯ್ಯಾ, ಇನ್ನು ನೀನು ಹೋಗಬಹುದು. ಇಲ್ಲಿ ನೀನಿದ್ದು ಮಾಡಬೇಕಾದ ಕೆಲಸ ಇನ್ನಿಲ್ಲ' ಎಂದನು.

ಕಡೆಗೆ ತಾಯಿ ಅಳುವನ್ನು ನಿಲ್ಲಿಸಿದಳು. ಪ್ರವಾಹ ಇಳಿಯಿತು. ಅವನು ಹೊಳೆಯನ್ನು ದಾಟಿ ಮನೆಯನ್ನು ಹೇಗೋ ಸೇರಿಕೊಂಡನು. ಅಲ್ಲಿ ತನ್ನ ಮಗ ಸತ್ತು ಬಿದ್ದಿರುವುದನ್ನು ಕಂಡನು. 'ನೀನು ಇಷ್ಟೆಲ್ಲ ಅಳದೆ ತೆಪ್ಪನಿದ್ದರೆ, ನಾನು ಇಲ್ಲಿಗೆ ಮಂತ್ರವಾದಿಯನ್ನು ಸಕಾಲದಲ್ಲಿ ಕರೆದುಕೊಂಡು ಬಂದು ಮಗನ ಪ್ರಾಣ ಉಳಿಸಬಹುದಾಗಿತ್ತು' ಎಂದು ಹೆಂಡತಿಗೆ ಹೇಳಿದನು.



ಅವಳು ನುಡಿದಳು: 'ಈ ಪ್ರಪಂಚದಲ್ಲಿ ಹೊಳೆಗಳು ಹುಟ್ಟಲೆಂದೆ ನಾನು ಅತ್ತೆ.' ಈ ಮಾತಿನಿಂದ ಅವನಿಗೆ ಸಿಟ್ಟು ಬಂತು. 'ಏನು, ಹೊಳೆಯ ಹುಟ್ಟಿಗಾಗಿ ಮಗನನ್ನು ಸಾವಿಗೆ ತೆತ್ತೆನೆಂದು ಹೇಳುವೆಯಾ?' ಎಂದು ಹಲ್ಲುಕಡಿದನು.

ಹೆಂಡತಿಯನ್ನು ಹೊಳೆಗೆ ನೂಕಿ, ತಾನೂ ಅವಳ ಹಿಂದೆ ಮುಳುಗಿಹೋದನು. ಮೂವರೂ ನಾಶವಾದರು. ಆದರೆ ಪ್ರಪಂಚ ಜೀವಂತವಾಗಿ ಪ್ರವಹಿಸುವ ಜಲರಾಶಿಯ ಉತ್ಸವವನ್ನು ಮೊದಲಬಾರಿಗೆ ಕಂಡಿತು.

## ಭೂಕಂಪಕ್ಕೆ ಕಾರಣ

ಭೀಮರಾಜ ಮಾಹುಲ್ಲಕ್ತ ಪರ್ವತದಲ್ಲಿ ವಾಸಿಸುತ್ತಿದ್ದಾಗ ಒಂದು ನೂತನ ವ್ಯವಸ್ಥೆಯನ್ನು ಆಚರಣೆಗೆ ತಂದನು. ಪ್ರತಿ ಹಳ್ಳಿಯ ಜನರೂ ಸರದಿಯ ಪ್ರಕಾರ ಬಂದು ತನ್ನ ಅರಮನೆಯಲ್ಲಿ ದುಡಿಯಬೇಕೆಂದು ಒತ್ತಾಯಪಡಿಸಿದನು. ವರುಷಕ್ಕೆ ಎರಡುಸಲ ಕಂದಾಯವನ್ನು ಸಲ್ಲಿಸಬೇಕೆಂದು ಆಜ್ಞೆಮಾಡಿದನು. ಆದರೆ ಅವನು ತನ್ನ ಪ್ರಜೆಗಳಿಂದಲೇ ನೇರವಾಗಿ ಹಣವನ್ನು ಸ್ವೀಕರಿಸುತ್ತಿರಲಿಲ್ಲ. ಅವರು ನಾಣ್ಯದ ಥೈಲಿಗಳನ್ನು ಮೊಲಗಳ ಬೆನ್ನಮೇಲೆ ಹೇರಿ ಅರಮನೆಗೆ ಕಳಿಸಬೇಕಾಗಿತ್ತು.

ಈ ಕಾರಣದಿಂದ ಜನರು ತಮ್ಮ ಮನೆಗಳಲ್ಲಿ ಮೊಲಗಳನ್ನು ಸಾಕಿ ಕೊಬ್ಬಿಸಿ ಪಳಗಿಸುವುದು ಅಗತ್ಯವಿತ್ತು. ಮೊಲಗಳು ಬಲಿತ ಮೇಲೆ ನಾಲ್ಕಾರು ಹಳ್ಳಿಗಳ ಜನರು ಒಟ್ಟುಗೂಡಿ ಒಂದು ಸರಿಯಾದ ಮೊಲವನ್ನು ಆರಿಸಿಕೊಂಡು ಅದರ ಬೆನ್ನಿನ ಮೇಲೆ ನಾಣ್ಯದ ಹೊರೆಯನ್ನು ಹೇರಿ ಕಳಿಸುತ್ತಿದ್ದರು. ಹೊತ್ತ ಹೊರೆ ಅದರ ಶಕ್ತಿಗೆ ಮೀರುತ್ತಿದ್ದುದರಿಂದ ಬೇಗ ಬೇಗ ಹೆಜ್ಜೆಹಾಕುವುದು ಅದಕ್ಕೆ ಸಾಧ್ಯವಿರಲಿಲ್ಲ ಒಂದು ದಿನದಲ್ಲಿ ಮುಗಿಸಬಹುದಾದ ಪಯಣಕ್ಕೆ ಒಂದು ತಿಂಗಳು ಹಿಡಿಯುತ್ತಿತ್ತು. ಈ ವಿಚಿತ್ರ ವ್ಯವಸ್ಥೆಯಿಂದ ಬೇಸರಗೊಂಡ ಹಳ್ಳಿಗರು ರಾಜನನ್ನೇ ಕೊಂದು ಇದಕ್ಕೆ ಮಂಗಳಹಾಡುವ ತೀರ್ಮಾನವನ್ನು ಕೈಕೊಂಡರು. 'ಅವನನ್ನೇ ಮುಗಿಸಿಬಿಟ್ಟರೆ ನಮಗೆಲ್ಲ ಸುಖವಾಗುತ್ತದೆ' ಎಂದುಕೊಂಡರು. ಆಯುಧಗಳನ್ನು ಧರಿಸಿ ಅರಮನೆಯ ಬಳಿಗೆ ಹೋದರು.

ರಾಜನಿಗೆ ಇಬ್ಬರು ಚಿಕ್ಕ ಗಂಡುಮಕ್ಕಳಿದ್ದರು. ದಂಗೆಕೋರರು ಮುತ್ತಿಗೆ ಹಾಕಿದಾಗ ರಾಜಸಭೆ ನಡೆಯುತ್ತಿತ್ತು. ಅವರು ಅಲ್ಲಿಗೆ ನುಗ್ಗಿ ಅವನನ್ನು ಕೊಂದರು. ಈ ಸುದ್ದಿ ತನಗೆ ಮುಟ್ಟಿದೊಡನೆಯೇ ರಾಣಿ ತನ್ನ ಮಕ್ಕಳಿಬ್ಬರನ್ನೂ ನೆಲಮಾಳಿಗೆಗೆ ಕಳಿಸಿ ಭದ್ರ ಪಡಿಸಿದಳು. ತನ್ನ ಒಡವೆ ವಸ್ತುಗಳನ್ನು ಬಾವಿಯಲ್ಲಿ ಬಚ್ಚಿಟ್ಟಳು. ರಾಣಿಯೂ ರಾಣಿವಾಸದವರೂ ಬಾವಿಗೆ ಬಿದ್ದು ಸತ್ತರು. ರಾಜನ ಆಪ್ತವರ್ಗದಲ್ಲಿ ಕೆಲವರು ತಲೆತಪ್ಪಿಸಿಕೊಂಡರು. ಉಳಿದವರು ಸಿಕ್ಕಿಬಿದ್ದು ಹತರಾದರು. ರಾಜನ ಮಕ್ಕಳಿಗಾಗಿ ದಂಗೆಕೋರರು ಅರಮನೆಯನ್ನು ಶೋಧಿಸಿದರು. ಅವರ ಪ್ರಯತ್ನ ಫಲಿಸಲಿಲ್ಲ.

ತಮ್ಮ ತಾಯ್ತಂದೆಗಳಿಗೆ ಒದಗಿದ ದುರ್ಗತಿಗೆ ಸೇಡು ತೀರಿಸಿಕೊಳ್ಳಲು ಆ ಮಕ್ಕಳು

ನೆಲಮಾಳಿಗೆಯಿಂದ ಹೊರಬರಲು ಮಾಡಿದ ಪ್ರಯತ್ನವಷ್ಟೂ ವ್ಯರ್ಥವಾಯಿತು; ಅದರ ಬಾಗಿಲನ್ನು ತಟ್ಟಿದ್ದೂ ತಟ್ಟಿದ್ದೇ. ಆ ಸದ್ದು ಯಾರ ಕಿವಿಗೂ ಬೀಳಲಿಲ್ಲ. ಬಾಗಿಲನ್ನು ಹಿಡಿದು ಅಲ್ಲಾಡಿಸಿದವು; ಅದರಿಂದ ಇಡೀ ಭೂಮಿಯೇ ಕಂಪಿಸಿತು. ಈಗಲೂ ಅವು ಕಾಲಕಾಲಕ್ಕೆ ಬಾಗಿಲನ್ನು ಕುಟ್ಟುತ್ತವೆ; ಭೂಕಂಪವಾಗುತ್ತದೆ.

# ಆದಿಮಾನವರು

## ಮಾನವರು ತಮ್ಮ ಬಾಲಗಳನ್ನು ಕಳೆದುಕೊಂಡದ್ದು ಹೇಗೆ?

ಮಾನವಜನ್ಮದ ಉದಯದ ವಿಚಾರದಲ್ಲಿ ಗಿರಿಜನರು ವಿಧವಿಧವಾದ ಕಲ್ಪನೆಗಳನ್ನು ಕಟ್ಟಿದ್ದಾರೆ. ಆದಿಮಾನವರನ್ನು ಸಾಕ್ಷಾತ್ ಭಗವಂತನೇ ಮಣ್ಣಿನಿಂದ ನಿರ್ಮಿಸಿದನೆಂದು ಕೆಲವರು ಹೇಳಿದರೆ, ಅವರು ಬ್ರಹ್ಮಾಂಡದಿಂದ ಒಡೆದುಬಂದರು ಎನ್ನುತ್ತಾರೆ ಇನ್ನು ಕೆಲವರು. ಭೂಮಿಯಲ್ಲಾದ ಒಂದು ಬಿರುಕಿನಿಂದ, ಭೂಮಾತೆಯ ಗರ್ಭದಿಂದ ಬಂದರು; ದೇವಿಯೊಬ್ಬಳ ಅಂಶದಿಂದ ಹುಟ್ಟಿದರು; ಪ್ರಾಣಿಗಳಿಂದ ಹುಟ್ಟಿದರು – ಹೀಗೆಲ್ಲ ಹೇಳುತ್ತಾರೆ

ಅವರು ಹುಟ್ಟಿದ್ದು ಹೇಗೇ ಇರಲಿ, ಈಗಿರುವುದಕ್ಕಿಂತ ಬೇರೆ ರೀತಿಯಲ್ಲಿದ್ದರೆಂಬುದನ್ನು ಎಲ್ಲರೂ ಒಪ್ಪುತ್ತಾರೆ; ಈ ಕೆಳಗಣ ಕಥೆಗಳು ಅದನ್ನೇ ಸಮರ್ಥಿಸುತ್ತವೆ. ಉದಾಹರಣೆಗೆ, ಒರಿಸ್ಸದ ಸೌರರ ಕಲ್ಪನೆಯಂತೆ ಆದಿಮಾನವರಿಗೆ ಬಾಲಗಳಿದ್ದವು.

ಆದಿಕಾಲದ ಸಪುಚ್ಛ ಮಾನವರು ಬಾಲದಿಂದಲೇ ನೆಲವನ್ನು ಗುಡಿಸುತ್ತಿದ್ದರು ಮದುವೆ, ಶವಸಂಸ್ಕಾರ ಮುಂತಾದ ವಿಶೇಷ ಸಂದರ್ಭಗಳಲ್ಲಿ ಒಬ್ಬರ ಬಾಲವನ್ನು ಇನ್ನೊಬ್ಬರು ತುಳಿಯುತ್ತ ಬಲು ತಮಾಷೆ ಮಾಡುತ್ತಿದ್ದರು.

ಒಂದು ದಿನ ಮಹಾದೇವ ಕಿಟ್ಟುಂಗ್ ಪೇಟೆಗೆ ಬಂದು ಸುತ್ತಲೂ ನೋಡಿದನು; ಅದು ಎಂದಿನಂತೆ ಜನಭರಿತವಾಗಿತ್ತು. ಶುದ್ಧವಾದ ತಂಬಾಕಿಗಾಗಿ ಅವನು ಅಂಗಡಿಯಿಂದಂಗಡಿಗೆ ಅಲೆಯುತ್ತಿದ್ದಾಗ ಯಾರೋ ಅವನ ಬಾಲವನ್ನು ತುಳಿದರು; ಅವನು ಮುಗ್ಗರಿಸಿದನು ದುರದೃಷ್ಟವಶಾತ್ ಅವನು ಕಲ್ಲಮೇಲೆ ಬಿದ್ದುದರಿಂದ ಮುಂದಿನ ಎರಡು ಹಲ್ಲು ಮುರಿದುವು. ಇಡೀ ಪೇಟೆಯೇ ಘೊಳ್ಳೆಂದು ನಕ್ಕಿತು. ಅವನಿಗೆ ತುಂಬಾ ಕೋಪ ಬಂತು ತನ್ನ ಬಾಲವನ್ನು ಕಿತ್ತು ಆಚೆಗೆಸೆದನು. ಅದನ್ನು ನೋಡಿ ಹೆದರಿ ಉಳಿದವರ ಬಾಲಗಳೂ ದೇಹದಿಂದ ಅಗಲಿ ಓಡಿಹೋದವು. ಕಿಟ್ಟುಂಗನ ಬಾಲ ತಾಳೆಯ ಮರವಾಯಿತು ಉಳಿದವರ ಬಾಲಗಳು ಹಂಚಿಯ ಹುಲ್ಲಾದವು; ಹಂಚಿಯ ಹುಲ್ಲಿನಿಂದ ಈಗ ಪೊರಕೆಗಳನ್ನು ಕಟ್ಟುತ್ತಾರೆ.

## ಪುಟಾಣಿ ಮನುಷ್ಯರು

ಆದಿಮಾನವರು ಪುಟಾಣಿ ಪ್ರಾಣಿಗಳಾಗಿದ್ದರೆಂದು ಬಸ್ತಾರಿನ ಮುರಿಯರು ಹೇಳುತ್ತಾರೆ.

ಈ ಪ್ರಪಂಚ ನಿರ್ಮಿತವಾದ ಮೊತ್ತಮೊದಲ ಕಾಲದಲ್ಲಿ ಸೂರ್ಯಚಂದ್ರರಿರಲಿಲ್ಲ. ಮುಗಿಲೂ ನೆಲವೂ ಗಂಡ ಹೆಂಡಿರಂತೆ ಬಲು ಹತ್ತಿರದಲ್ಲಿದ್ದವು. ಆ ಇಕ್ಕಟ್ಟಿನಲ್ಲಿ ಅಡ್ಡಾಡಬೇಕಾಗಿದ್ದ ಜನರು ಗಿಡ್ಡರೇ ಆಗಿದ್ದದ್ದು ಸಹಜವಾಗಿದೆ. ಅವರು ಇಲಿಗಳನ್ನು ಕಟ್ಟಿ ನೆಲವನ್ನು ಉಳುತ್ತಿದ್ದರು ಬದನೆಯ ಗಿಡದಲ್ಲಿ ಕಾಯನ್ನು ಕೀಳಲು ಅವರು ಮಾಡುತ್ತಿದ್ದ ಸಾಹಸವನ್ನು ನೋಡಿದರೆ 'ಇವರೇನು ಮಾವಿನ ಮರದ ತುದಿಗಾಯಿಯನ್ನು ಕೀಳಲು ಹವಣಿಸುತ್ತಿರುವರೊ!' ಎನ್ನಬಹುದಿತ್ತು ನಡೆಯುವಾಗ ಅವರ ತಲೆ ಮೋಡಕ್ಕೆ ಡಿಕ್ಕಿ ಹೊಡೆಯುತ್ತಿತ್ತು

ಈ ಕಷ್ಟವನ್ನು ಬಹುಕಾಲ ಅನುಭವಿಸುತ್ತ ಬಂದು ಅವರಿಗೆ ತುಂಬಾ ಆಯಾಸವಾಯಿತು. ಒಂದು ದಿನ ಮುದುಕಿಯೊಬ್ಬಳು ತನ್ನ ಗಿಡದ ಸುತ್ತಿನ ತೋಟವನ್ನು ಗುಡಿಸುತ್ತಿದ್ದಾಗ ಪೊರಕೆಯಿಂದ ಆಕಾಶವನ್ನು ಹೊಡೆದಳು. ತುಂಬಾ ಕೋಪಗೊಂಡು ಅವಳು ಕೊಟ್ಟ ಬಲವಾದ ಪೆಟ್ಟಿನಿಂದ ಆಕಾಶ – ಅದು ಈಗಿರುವಲ್ಲಿಗೆ – ದೂರ ಸರಿಯಿತು.

ಆಮೇಲೆ ಜನರು ತಮಗೆ ಒಪ್ಪುವ ಅಳತೆಗೆ ಬೆಳೆದು ಓಡಾಡಲು ಬೇಕಾದಷ್ಟು ಅವಕಾಶ ಸಿಕ್ಕಿತು.

## ಮೊದಲ ಕಣ್ಣುಗಳು

ತಮಗೆ ಕಣ್ಣು ಬರುವುದಕ್ಕೆ ಮೊದಲು ಮನುಷ್ಯರು ನಾಯಿಮರಿಗಳಂತೆ ಒಬ್ಬರ ಮೇಲೊಬ್ಬರು ಎಡವಿಬೀಳುತ್ತಿದ್ದರು. ಯಾವ ಕೆಲಸವನ್ನು ಮಾಡಲೂ ಅವರಿಗೆ ಆಗುತ್ತಿರಲಿಲ್ಲ. ಅವರು ಹೆಚ್ಚುಕಾಲ ಬದುಕುತ್ತಲೂ ಇರಲಿಲ್ಲ. ಒಂದು ದಿನ ದೇವರು 'ನನ್ನ ಮಕ್ಕಳಿಗಾಗಿ ನಾನು ಇಡೀ ಪ್ರಪಂಚವನ್ನು ಸೃಷ್ಟಿಸಿದ್ದೇನೆ. ಅವರ ಯೋಗಕ್ಷೇಮವನ್ನು ವಿಚಾರಿಸಿ ಬರೋಣ' ಎಂದುಕೊಂಡನು. ಕೋಲೂರಿಕೊಂಡು ಅವನು ಮರ್ತ್ಯಲೋಕಕ್ಕೆ ಬಂದನು. ಬೀಳುತ್ತ ಏಳುತ್ತ ಕಾಲಹರಣಮಾಡುತ್ತಿದ್ದ ಮಕ್ಕಳನ್ನು ಕಂಡು ಅವನಿಗೆ ಅಪಾರ ಸಂಕಟವಾಯಿತು. 'ಕಣ್ಣಿಲ್ಲದಿರುವುದರಿಂದ ಇವರು ಈ ಗತಿಗೆ ಇಳಿದಿದ್ದಾರೆ' ಎಂದು ಕೊಂಡನು.

ಹಾಗೆಯೇ ಹೊಳೆಯ ತಡಿಗೆ ಹೋದನು; ಅಲ್ಲೊಂದು ದೊಡ್ಡ ನಳ್ಳಿ ದೊಡ್ಡ ದೊಡ್ಡ ಕಣ್ಣುಗಳನ್ನು ಬಿಟ್ಟುಕೊಂಡು ಕುಳಿತಿರುವುದನ್ನು ಕಂಡನು. 'ನನಗೆ ಬೇಕಾದದ್ದು ಇದೇ' ಎಂದುಕೊಂಡು ನಳ್ಳಿಯನ್ನು ಹಿಡಿಯಹೊರಟನು. ಅದು ಅವನನ್ನು ಕಚ್ಚಿ ತನ್ನ ಕಣ್ಣುಗಳನ್ನು ಒಳಕ್ಕೆ ಸೆಳೆದುಕೊಂಡು ತನ್ನ ಬಿಲವನ್ನು ಹೊಕ್ಕಿತು.

ದೇವರು ಕಾಡಿಗೆ ಹೋದನು. ಅಲ್ಲೊಂದು ಮರದ ಮೇಲೆ ಒಂದು ಗೂಬೆ ದೊಡ್ಡದಾಗಿ ಕಣ್ತೆರೆದು ಕುಳಿತಿರುವುದನ್ನು ಕಂಡನು. 'ನನಗೆ ಬೇಕಾದದ್ದು ಇದೇ' ಎಂದುಕೊಂಡು ಅದನ್ನು ಹಿಡಿಯಲೆತ್ನಿಸಿದನು. ಅದು ಅವನನ್ನು ಪರಚಿ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಹಾರಿಹೋಯಿತು.

ದೇವರಿಗೆ ಆಯಾಸವಾಯಿತು. ಒಂದು ಅಂಜೂರದ ಮರದ ನೆರಳಿನಲ್ಲಿ ಕುಳಿತನು. ಅದರ ರೆಂಬೆಯ ಮೇಲೆ ಒಂದು ಕಾಗೆ ಹಣ್ಣು ತಿನ್ನುತ್ತ ಕುಳಿತಿತ್ತು. ಮಲಗಿದ್ದ ಹಾಗೆಯೇ ಅವನ ಮುಂದೆ ಕೆಲವು ಕಲ್ಲುಗಳು ಬಿದ್ದವು. 'ಕಣ್ಣಿನ ನಿರ್ಮಾಣಕ್ಕೆ ಇವು ಅಣಿಯಾಗಿವೆ' ಎಂದುಕೊಂಡನು. ಅವುಗಳನ್ನು ಆರಿಸಿಕೊಂಡು ಬಂದು ಮನುಷ್ಯರ ಮುಖಗಳಲ್ಲಿ ಮೆಟ್ಟಿದನು. ಅವರು ಎಲ್ಲವನ್ನೂ ನೋಡಬಲ್ಲವರಾದರು.

ಕಣ್ಣು ಬಂದಮೇಲೂ ಅವರಿಗೆ ರೆಪ್ಪೆಗಳಾಗಲಿ ರೆಪ್ಪೆಗೂದಲಾಗಲಿ ಇರಲಿಲ್ಲ. ಅವರ ಕಣ್ಣು ಸದಾ ತೆರೆದೇ ಇತ್ತು. ಯಾವನಾದರೂ ಎಚ್ಚರವಾಗಿದ್ದಾನೆಯೆ, ನಿದ್ರಿಸುತ್ತಿದ್ದಾನೆಯೆ ಎಂದು ಹೇಳುವುದಕ್ಕೇ ಆಗುತ್ತಿರಲಿಲ್ಲ.

ಒಂದು ರಾತ್ರಿ ಒಬ್ಬ ಮುದುಕನೂ, ಅವನ ಹೆಂಡತಿಯೂ, ಮಗನೂ ಮಗಳೂ ತಮ್ಮ ಜೋಪಡಿಯಲ್ಲಿ ಮಲಗಿ ನಿದ್ರಿಸುತ್ತಿದ್ದರು. ಆಗ ಮೂವರು ಜಲಸೋದರಿಯರು ಅವರನ್ನು ನೋಡಲು ಬಂದರು. ದೊಡ್ಡದಾಗಿ ಕಣ್ಣುತೆರೆದು ನಿದ್ರಿಸುತ್ತಿರುವ ಅವರನ್ನು ಕಂಡು 'ನಾವು ಬಂದರೂ ಎಚ್ಚರವಾಗಿರುವ ಇವರು ನಮ್ಮನ್ನು ಒಳಗೆ ಬನ್ನಿ ಎನ್ನಲಿಲ್ಲ'ವೆಂದು ಆ ಸೋದರಿಯರು ಅಚ್ಚರಿಪಟ್ಟರು. ಅಹೋರಾತ್ರಿಗಳಲ್ಲಿ ಇವರ ಕಣ್ಣು ಒಂದೇ ರೀತಿಯಲ್ಲಿರುತ್ತವೆ ಎಂಬುದು ಅವರಿಗೆ ಬೆಳಗಾದ ಮೇಲೆ ತಿಳಿಯಿತು. ತಿಳಿಗೊಳನ ಕನ್ನಡಿಯಲ್ಲಿ ಜಲಸೋದರಿಯರು ಇಣಿಕಿನೋಡಿದಾಗ ತಮಗೆ ರೆಪ್ಪೆಗಳೂ ರೆಪ್ಪೆಗೂದಲೂ ಇರುವುದನ್ನು ಕಂಡಿದ್ದರು. ಅವರಿಗೆ ಈ ಮನುಷ್ಯರ ಕಣ್ಣು ವಿಚಿತ್ರವಾಗಿ ತೋರಿತು ಅವರು ಕಾಡಿಗೆ ಹೋದರು. ಅಲ್ಲೊಂದು ನವಿಲನ್ನು ಹಿಡಿದರು. ಅದರ ಪುಚ್ಛದ ನವುರಾದ ಗರಿಗಳಿಂದ ರೆಪ್ಪೆಗೂದಲನ್ನು ರಚಿಸಿ ಆ ನಾಲ್ವರ ಕಣ್ಣಿಗೆ ಕಟ್ಟಿದರು. ಆಗ ಅವರ ರೆಪ್ಪೆಗಳು ಮೇಲೂ ಕೆಳಗೂ ಆಡಿದವು; ನಿದ್ರಿಸುವಾಗ ಅವರ ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದವು.

# ಮನುಷ್ಯರು ಮಾತಾಡಲು ಪ್ರಾರಂಭಿಸಿದ್ದು ಹೇಗೆ

ಆದಿಮಾನವರಿಗೆ ನಾಲಗೆ ಇರಲಿಲ್ಲ. ಮಾತು ಬರುತ್ತಿರಲಿಲ್ಲ. ಈ ಕೊರತೆಯನ್ನು ತುಂಬುವುದು ಹೇಗೆಂದು ದೇವರು ಯೋಚಿಸುತ್ತಿದ್ದನು. ಬಹುಕಾಲ ಅವನಿಗೆ ಏನು ಮಾಡಬೇಕೆಂಬುದೇ ತೋರಲಿಲ್ಲ. ಒಂದು ದಿನ ಸ್ನಾನಕ್ಕೆಂದು ಅವನು ಹೊಳೆಗೆ ಹೋದನು. ಅನಂತರ ಬಿಸಿಲಿನಲ್ಲಿ ಮೈ ಒಣಗಿಸಿಕೊಳ್ಳಲು ಒಂದು ಬಂಡೆಯ ಮೇಲೆ ಕುಳಿತಿದ್ದನು. ಅದರಡಿಯ ಒಂದು ಬಿಲದಲ್ಲಿ ಒಂದು ಕಪ್ಪೆಯೂ ಅದರ ಹೆಂಡತಿಯೂ ವಾಸ ಮಾಡುತ್ತಿದ್ದರು.

ಆ ಕಪ್ಪೆ ತನ್ನ ಹೆಂಡತಿಗೆ ಹೇಳಿತು "ನಾಳೆ ಮಳೆ ಸುರಿಯುತ್ತದೆ; ನಮ್ಮ ಮರಿಗಳು ಮಹಾ ಪ್ರವಾಹದಲ್ಲಿ ತೇಲಿಹೋಗುತ್ತವೆ."

ಹೀಗೆ ಕಪ್ಪೆಗಳು ಸ್ಪಷ್ಟವಾಗಿ ಮಾತಾಡುತ್ತಿರುವುದನ್ನು ಕೇಳಿದ ದೇವರು ಅವುಗಳನ್ನು ಹಿಡಿದುಕೊಂಡು ನಾಲಗೆಯನ್ನು ಪರೀಕ್ಷಿಸಿದನು. ಅವನಿಗೆ ಬೇಕಾದದ್ದು ಇಲ್ಲಿ ಸಿಕ್ಕಿತು ಅವುಗಳ ನಾಲಗೆಗಳನ್ನು ಕತ್ತರಿಸಿಕೊಂಡು ತಂದು ಮನುಷ್ಯರ ಬಾಯಿಯಲ್ಲಿ ಅಳವಡಿಸಿದನು. ಅದಾದ ಮೇಲೆ ಮನುಷ್ಯರು ವಾಕ್-ಶಕ್ತಿಯನ್ನು ಪಡೆದರು.



## ದೊಡ್ಡ ಕಿವಿಗಳು

ಒಂದಾನೊಂದು ಕಾಲದಲ್ಲಿ ಮನುಷ್ಯರಿಗೆ ಬಲು ದೊಡ್ಡ ಕಿವಿಗಳಿದ್ದವು. ಅದನ್ನೇ ಹಾಸಿ ಹೊದೆಯುವಷ್ಟು ದೊಡ್ಡವಾಗಿದ್ದವು ಆ ಕಿವಿಗಳು.

ಒಂದು ದಿನ ಬೇಟೆಗೆ ಹೋಗಿದ್ದ ದೇವರು ದೊಡ್ಡ ಕಿವಿಗಳಿಂದ ತನ್ನ ಇಡೀ ದೇಹವನ್ನು ಮುಚ್ಚಿಕೊಂಡಿದ್ದ ಮನುಷ್ಯನೊಬ್ಬನನ್ನು ಮೃಗವೆಂದು ತಪ್ಪು ತಿಳಿದು ಬಾಣವೆಸೆದು ಕೊಂದನು. ಆಮೇಲೆ ಆ ದೇಹವನ್ನು ನೋಡಿ ತಾನು ಕೊಂದದ್ದು ಮನುಷ್ಯನನ್ನು ಎಂಬುದನ್ನು ತಿಳಿದು ದೇವರು ತುಂಬಾ ಪಶ್ಚಾತ್ತಾಪ ಪಟ್ಟನು. ಇಂಥ ತಪ್ಪು ಮುಂದೆಂದೂ ಆಗದಂತೆ ಮಾಡಲು ಅವನು ಆ ಮನುಷ್ಯನ ಕಿವಿಗಳನ್ನು ಕೊಯ್ದು ಹಾಕಿದನು. ಸತ್ತವನನ್ನು ಮತ್ತೆ ಬದುಕಿಸಿದನು.

ಅಂದಿನಿಂದೀಚೆಗೆ ನಮ್ಮ ಕಿವಿಗಳು, ಈಗಿರುವ ಹಾಗೆ, ಚಿಕ್ಕವಾದವು.

## ಗಡ್ಡದ ಹೆಂಗಸರು

ಬಲುಹಿಂದೆ ಹೆಂಗಸರಿಗೆ ಗಡ್ಡ ಮೀಸೆಗಳಿದ್ದವು. ಆ ಕಾಲದಲ್ಲಿ ಹುಲಿ ಕಾಡಿಗೆ ರಾಜನಾಗಿತ್ತು. ಹುಲಿಗೊಬ್ಬ ಮಗ; ಆ ಮಗ ಬೆಳೆದ ಮೇಲೆ, ಅವನಿಗೆ ಒಪ್ಪುವ ಚೆಲುವೆಯಾದ ಹೆಣ್ಣನ್ನು ಹುಡುಕಿ ಅವಳನ್ನು ಸೊಸೆಯಾಗಿ ತಂದುಕೊಳ್ಳಲು ಹುಲಿ ಎಲ್ಲ ಕಡೆಗೂ ಹೋಗಿಬಂತು. ಅಂಥ ಹೆಣ್ಣು ಸಿಕ್ಕಲಿಲ್ಲ.

ಕಾಡಿನ ಪ್ರಾಣಿಗಳನ್ನೆಲ್ಲ ಬಳಿಗೆ ಕರೆಸಿಕೊಂಡು ಹುಲಿ ಅಪ್ಪಣೆಕೊಡಿಸಿತು: 'ಚೆಲುವೆಯಾದ ಹೆಣ್ಣನ್ನು ಪತ್ತೆಮಾಡಿ ತನ್ನಿ. ನನ್ನ ಮಗನಿಗೆ ಮದುವೆಮಾಡುತ್ತೇನೆ.'

ಪ್ರತಿಯೊಂದು ಮೃಗವೂ ಆಲೋಚಿಸತೊಡಗಿತು: 'ನನ್ನ ಮಗಳು ಹುಲಿಯ ಸೊಸೆಯಾಗುವುದಾದರೆ! ಕಾಡಿಗೆ ರಾಣಿ ಎನ್ನಿಸಿಕೊಂಡರೆ!'

ಒಬ್ಬಳು ಮುದುಕಿಯಿದ್ದಳು; ಅವಳ ಬಳಿ ಒಂದು ಆಡಿತ್ತು. ಹುಲಿಯ ಡಂಗುರವನ್ನು ಕೇಳಿದ ಆಡು ತನ್ನ ಒಡತಿಗೆ ಹೇಳಿತು: 'ನಿನ್ನ ಕೂದಲನ್ನು ನನಗೆ ಕೊಡು, ಹುಲಿ ತನ್ನ ಮಗನಿಗೆ ಮದುವೆಮಾಡಿಕೊಳ್ಳುವಷ್ಟು ಚೆಲುವೆಯಾಗುತ್ತೇನೆ, ಮೂರುನಾಲ್ಕು ದಿನ ಕಳೆದಮೇಲೆ ಹಿಂದಿರುಗಿ ನಿನಗೆ ಎಲ್ಲವನ್ನೂ ಕೊಟ್ಟುಬಿಡುತ್ತೇನೆ.'

ಮುದುಕಿ ತನ್ನ ಗಡ್ಡಮೀಸೆಗಳನ್ನು ಕಿತ್ತು ಆಡಿಗೆ ಅಲಂಕಾರಮಾಡಿತು. ಆದರೆ ಕಾಡಿಗೆ ಹೋದ ಆಡು ಹಿಂದಿರುಗಲೇ ಇಲ್ಲ. ಅಂದಿನೀಚೆಗೆ ಹೆಂಗಸರ ಮುಖದ ಮೇಲೆ ಕೂದಲು ಬೆಳೆಯುವುದು ನಿಂತಿತು.

# ಬದುಕು ಸಪ್ಪೆಯಾಗಿದ್ದಾಗ

ಆದಿಯಲ್ಲಿ ವಿನೋದದ ಸ್ಪರ್ಶವೇ ಇಲ್ಲದ ಕಾಲವೊಂದಿತ್ತೆಂದೂ, ಆಗ ಯುವಕ ಯುವತಿಯರು ಕೇವಲ ಗಾಂಭೀರ್ಯದಿಂದಲೂ ಶಿಸ್ತಿನಿಂದಲೂ ಕೂಡಿದ್ದರೆಂದೂ ಒರಿಸ್ಸದ ಕೊಂಡರು ಹೇಳುತ್ತಾರೆ. ಅವರು ಅಕ್ಕಪಕ್ಕದಲ್ಲಿ ಕುಳಿತಿರುವಾಗಲೂ ತಮ್ಮ ಸಾಲದ ವಿವರಗಳನ್ನೂ, ಬೇಸಾಯದ ಸ್ಥಿತಿಗತಿಗಳನ್ನೂ ಚರ್ಚಿಸುತ್ತಿದ್ದರೇ ವಿನಾ ಎಂದೂ ಕಿಸಿ ಕಿಸಿ ನಗುತ್ತಿರಲಿಲ್ಲ. ಚಕ್ಕಂದವಾಡುತ್ತಿರಲಿಲ್ಲ.

ಇದನ್ನು ನೋಡಿದ ನಿರಂತಲಿ ದೇವಿಗೆ ಇವರ ಬದುಕು ಬೇಸರವೆನಿಸಿತು. 'ಇವರ ನೀರಸ ಪ್ರಪಂಚಕ್ಕೆ ಹಾಸ್ಯರಸವನ್ನು ಹಾಯಿಸಲು ಯಾವುದಾದರೂ ದಾರಿಯಿರಬೇಕು' ಎಂದುಕೊಂಡು, ಕಾಡಿಗೆ ಹೋಗಿ ಸ್ವಲ್ಪ ಮೇಣವನ್ನು ದೊರಕಿಸಿಕೊಂಡು ಅದರಿಂದ ಒಂದು ಚಕ್ಕಲಗುಳಿಯಿಡುವ ತಿಗಣೆಯನ್ನು ನಿರ್ಮಿಸಿ ತಂದು ಅದನ್ನು ಆ ಯುವಕ ಯುವತಿಯರ ಗೋಷ್ಠಿಗೆ ಕಳಿಸಿದಳು.

'ಒಳಹೊಕ್ಕ ಕೂಡಲೆ ನೀನು ಅವರ ಗಲ್ಲದ ಕೆಳಗೆ, ಕಂಕುಳಲ್ಲಿ, ಪಕ್ಕೆಲುಬುಗಳಲ್ಲಿ ನೆಲಸು. ಮೈಯನ್ನು ಯಾರಾದರೂ ಮುಟ್ಟಿದರೆ ಒಳಗೆಲ್ಲ ಓಡಾಡು. ಆಗ ಅವರಿಗೆ ವಿನೋದದ, ಅನುಭವವಾಗುತ್ತದೆ, ನಗುವ ಬಯಕೆ ಹುಟ್ಟುತ್ತದೆ' ಎಂದು ಅದಕ್ಕೆ ಹೇಳಿಕೊಟ್ಟಳು.

ಚಕ್ಕಲಗುಳಿಯಿಡುವ ತಿಗಣೆ ಯುವಕ ಯುವತಿಯರ ಮೈಯನ್ನು ಸೇರಿತು. ಎಂಟುದಿನ ಕಳೆದಮೇಲೆ ಅವರ ಯೋಗಕ್ಷೇಮವನ್ನು ವಿಚಾರಿಸುವುದಕ್ಕಾಗಿ ನಿರಂತಲಿ ಮತ್ತೆ ಬಂದಳು. ಈಗ ಸಾಲದ ವಿಷಯದಲ್ಲಾಗಲಿ ಬೇಸಾಯದ ವಿಷಯದಲ್ಲಾಗಲಿ ಚರ್ಚೆ ನಡೆಯುತ್ತಿರ ಲಿಲ್ಲ; ಅಲ್ಲಿ ಕಂಡುಬಂದದ್ದು ಒಂದೇ – ನಗೆ, ಒಲವು, ವಿನೋದ ಕ್ರೀಡೆ. ನಿರಂತಲಿ ಯುವತಿಯೊಬ್ಬಳ ಸೊಂಟದ ಮೇಲೆ ಕೈಹಾಕಿದಳು; ಅವಳು ಕೂಡಲೆ ಕಿಸಿಕಿಸಿ ನಗತೊಡಗಿದಳು.

ಜನಜೀವನದಲ್ಲಿ ನೂತನ ಸೌಖ್ಯದ ಯುಗ ಆರಂಭವಾಯಿತು.

# ಧೀರ ಮಕ್ಕಳು

ಪ್ರಪಂಚದ ಆರಂಭದಲ್ಲಿ ದೇವ, ಮಾನವ, ಮೃಗ, ಪಿಶಾಚಗಳೆಲ್ಲ ಒಟ್ಟಾಗಿ ಬಾಳಿ ಒಬ್ಬರೊಡನೊಬ್ಬರು ಮಾತಾಡುತ್ತಿದ್ದ ಒಂದು ಅಪೂರ್ವವೂ ರೋಮಾಂಚನಕರವೂ ಆದ ಕಾಲವೊಂದಿತ್ತು. ಈಶಾನ್ಯಗಡಿ ಪ್ರದೇಶದ ಪಶ್ಚಿಮಕ್ಕಿರುವ ಗುಡ್ಡಗಾಡಿನ ನಿವಾಸಿಗಳಾದ ಅಕ-ಜನರು ಇದರ ಬಗೆಗೆ ಕಥೆಯೊಂದನ್ನು ಹೇಳುತ್ತಾರೆ.

ಬಲುಹಿಂದೆ ಅವಾ ಎಂಬ ಹೆಸರಿನ ಮಾನವನೊಬ್ಬನಿದ್ದನು. ಅವನ ಮೈಯೆಲ್ಲ ಒತ್ತುಗೂದಲಿನಿಂದ ಆವೃತವಾಗಿ ಕರಡಿಯಂತಿದ್ದರೂ, ಅವನು ಸೂರ್ಯ-ಪುತ್ರಿಯೂ



ಸುಂದರಿಯೂ ಆದ ಜುಸಾಮಳನ್ನು ಮದುವೆಯಾಗಿದ್ದನು. ವಿವಾಹ-ಸಮಯದಲ್ಲಿ ಸೂರ್ಯ ಅವಳಿಗೆ ಒಂದು ಕೋಳಿಯ ಪುಕ್ಕವನ್ನೂ ಕೆಲವು ಹಂದಿಯ ಮುಳ್ಳುಗಳನ್ನೂ ಬಳುವಳಿಯಾಗಿ ಕೊಟ್ಟನು. ಅವಾ ಹೆಂಡತಿಯನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಕಾಲಕ್ರಮದಲ್ಲಿ ಅವಳಿಗೆ ಅವಳಿ ಮಕ್ಕಳಾದವು; ಗಂಡು ಮಗುವಿಗೆ ಸಿಬ್ಜಿಸಾವೊ ಎಂದೂ, ಹೆಣ್ಣು ಮಗುವಿಗೆ ಸಿಬ್ಜಿಂ ಸಾಂ ಎಂದು ಹೆಸರಿಟ್ಟರು.

ಮಕ್ಕಳಿಗೆ ಬಾಲಾರಿಷ್ಟವೊದಗಿತು. ತಂದೆ ಪೂಜಾರಿಗೆ ಹೇಳಿಕಳಿಸಿದನು. ಅವಾ ಒಂದು ಕೋಳಿಯನ್ನೂ ಒಂದು ಹಂದಿಯನ್ನೂ ಬಲಿಗೊಟ್ಟರೆ ಮಕ್ಕಳು ಗುಣ ಹೊಂದುತ್ತವೆಂದೂ; ಆದರೆ ಆ ಕೋಳಿಯೂ, ಹಂದಿಯೂ ಕಾಡಿನಿಂದ ತಂದವಾಗಿರಬಾರದು, ಮನೆಯಲ್ಲಿ ಸಾಕಿದವೇ ಆಗಿರಬೇಕೆಂದೂ ಪೂಜಾರಿ ನುಡಿದಳು.

ದುರದೃಷ್ಟವಶಾತ್ ಅವಾನ ಮನೆಯಲ್ಲಿ ಹಂದಿಯಾಗಲಿ ಕೋಳಿಯಾಗಲಿ ಇರಲಿಲ್ಲ. ಅವುಗಳನ್ನು ಎಲ್ಲಿಂದ ತರಬೇಕೆಂಬುದು ಅವನಿಗೆ ತೋರಲಿಲ್ಲ. ಚಿಂತಾಕ್ರಾಂತನಾಗಿದ್ದ ಗಂಡನನ್ನು ನೋಡಿ ಹೆಂಡತಿ: 'ಏನು ಸಮಾಚಾರ' ಎಂದು ಕೇಳಿದಳು. ಪೂಜಾರಿ ಹೇಳಿದ್ದನ್ನು ಅವನು ಅವಳಿಗೆ ವಿವರಿಸಿದನು. ಜುಸಾಂ ಹೇಳಿದಳು: 'ಯೋಚನೆ ಮಾಡಬೇಡ; ಒಂದು ಬಿದಿರಿನ ಪಂಜರವನ್ನೂ, ಮರಗಿಯನ್ನೂ ತರಿಸು.'

ಅದರಂತೆಯೇ ಅವಾ ಒಂದು ಬಿದಿರಿನ ಪಂಜರವನ್ನು ಕಟ್ಟಿ, ಅದರ ಪಕ್ಕದಲ್ಲಿ ಒಂದು ಮರದ ಮರಗಿಯನ್ನು ತಂದಿರಿಸಿದನು. ಎಲ್ಲವೂ ಅಣಿಯಾದ ಮೇಲೆ ಜುಸಾಂ ತಂದೆಯ ಮನೆಯಿಂದ ತಂದಿದ್ದ ಪುಕ್ಕವೊಂದನ್ನು ತೆಗೆದು ಅದರ ಮೇಲೆ ಊದಿದಳು. ಪಂಜರದೊಳಗೆ ಒಂದು ಕೋಳಿಯೂ ಒಂದು ಹುಂಜವೂ ಪ್ರತ್ಯಕ್ಷವಾದವು. ಆಮೇಲೆ ಮರಗಿಯ ಮುಂದೆ ಕುಳಿತು, ತಂದೆಯ ಮನೆಯಿಂದ ತಂದಿದ್ದ ಹಂದಿಯ ಮುಳ್ಳುಗಳನ್ನು ಹಿಡಿದು ಅವುಗಳ ಮೇಲೂ ಹಿಂದಿನಂತೆ ಊದಿದಳು. ಆಗ ಮರಗಿಯ ಮುಂದೆ ಒಂದು ಗಂಡು ಹಂದಿಯೂ ಒಂದು ಹೆಣ್ಣು ಹಂದಿಯೂ ಪ್ರತ್ಯಕ್ಷವಾದವು.

ಆ ಕ್ಷಣವೇ ಹಂದಿಗಳೂ ಕೋಳಿಗಳೂ ಅಳತೊಡಗಿದವು. ಜುಸಾಂ ತನ್ನ ಎದೆ ಹಾಲನ್ನೇ ಅವುಗಳಿಗೆ ಕೊಟ್ಟು ಸಂತೈಸಲೆತ್ನಿಸಿದಳು. ಅವು ಅದನ್ನು ಕುಡಿಯಲಿಲ್ಲ. ಅವಳು ಕೇಳಿದಳು 'ನೀವು ನನ್ನ ಹಾಲನ್ನು ಕೂಡ ಒಲ್ಲದಿರುವುದರಿಂದ, ನಿಮ್ಮ ಅಳುವಿಗೆ ಕಾರಣ ಹೇಳಿ.'

ಹಂದಿಗಳೂ ಕೋಳಿಗಳೂ ಉತ್ತರಿಸಿದವು; 'ನಮಗೆ ಹಸಿವಾಗುತ್ತದೆ. ನಾವು ಅಳುತ್ತಿದ್ದೇವೆ.'

ಜುಸಾಂ ಹೇಳಿದಳು: 'ನಿಮಗೆ ಕೊಡಲು ನನ್ನ ಬಳಿ ಇನ್ನೇನೂ ಇಲ್ಲ. ಆದ್ದರಿಂದಲೇ ನಾನು ನಿಮಗೆ ಎದೆಹಾಲನ್ನು ನೀಡಿದ್ದು.'

ಕೋಳಿಗಳೂ ಹಂದಿಗಳೂ ಹೇಳಿದವು 'ನಾವು ಏನು ಬೇಕಾದರೂ ಮಾಡೇವು. ನಿನ್ನ ಹಾಲನ್ನು ಮಾತ್ರ ಕುಡಿಯುವುದಿಲ್ಲ. ನಾವದನ್ನು ಕುಡಿದರೆ ನೀನು ನಮ್ಮನ್ನು ಕೊಲ್ಲಲಿಚ್ಚಿಸುವುದಿಲ್ಲ. ಕೊಲ್ಲುವುದಕ್ಕೆ ತಾನೆ ನಮ್ಮನ್ನು ಸೃಷ್ಟಿಸಿರುವುದು!'

ಜುಸಾಂ ನುಡಿದಳು, 'ಸರಿ, ನನ್ನ ಬಳಿ ಕೊಡಲು ಇನ್ನೇನೂ ಇಲ್ಲ. ನಿಮಗೆ ಅದು ಬೇಡವಾದರೆ, ನಿಮಗಿಲ್ಲಿ ಸಿಕ್ಕುವುದನ್ನು ತಿನ್ನಿ.'

ಕೂಡಲೆ ಕೋಳಿ ಮೊಟ್ಟೆಯಿಟ್ಟಿತು. ಮರಿಗಳು ಹೊರಬಂದವು. ಹೆಣ್ಣು ಹಂದಿಯೂ ಮರಿಹಾಕಿತು. ಅವಾ ಒಂದು ಕೋಳಿಮರಿಯನ್ನೂ ಹಂದಿಯನ್ನೂ ಒಯ್ದು ಬಲಿಗೊಟ್ಟನು. ಅವನ ಮಕ್ಕಳು ಗುಣಹೊಂದಿದವು.

ಅವಾನ ಮನೆಗೆ ಕೋಳಿಗಳೂ ಹಂದಿಗಳೂ ಬಂದದ್ದು ಹೀಗೆ. ಆದರೆ ಅವರ ಬಳಿ ಕಾಳಿರಲಿಲ್ಲ. ಜುಸಾಂ ಗಂಡನಿಗೆ ಹೇಳಿದಳು: 'ನನ್ನ ತಂದೆಯ ಮನೆಗೆ ಹೋಗು; ಅವನ ಬಳಿ ಧಾನ್ಯ ಹೇರಳವಾಗಿದೆ. ಅವನನ್ನು ನೀನು ವಿನಯದಿಂದ ಕೇಳಿಕೊಂಡರೆ ಅವನು ಅದರಲ್ಲಿ ಸ್ವಲ್ಪವನ್ನು ಕೊಡುತ್ತಾನೆ.'

ಅವಾ ಹೇಳಿದನು 'ಆದರೆ ನಿನ್ನ ತಂದೆಯ ಮನೆಯ ದಾರಿ ನನಗೆ ತಿಳಿಯದು!'

ಗಂಡನಿಗೆ ದಾರಿ ತೋರುವುದಕ್ಕಾಗಿ ಜುಸಾಂ ಅವನೊಂದಿಗೆ ಅರ್ಧ ದೂರ ನಡೆದಳು. ಅನಂತರ ಹೇಳಿದಳು 'ಈಗ ನಿನಗೆ ದಾರಿ ತಿಳಿಯಿತಷ್ಟೆ! ಆದರೆ ಸ್ವಲ್ಪ ಮುಂದೆ ಒಂದು ಸ್ಥಳವಿದೆ. ಅಲ್ಲಿ ದಾರಿ ಕವಲೊಡೆಯುತ್ತದೆ. ಬಲದಾರಿಗೇ ತಿರುಗಬೇಕು. ಇದನ್ನು ಮರೆಯದಿರು. ಎಡದಾರಿಗೆ ಹೋಗಲೇಬೇಡ. ಎಡಕ್ಕೆ ಹೋದೆಯಾದರೆ ಎಲ್ಲಾ ಬಗೆಯ ತೊಂದರೆಗೂ ಸಿಕ್ಕಿಬೀಳುತ್ತೀಯೆ.'

ಇಷ್ಟು ಹೇಳಿ ಜುಸಾಂ ಮನೆಗೆ ಹಿಂದಿರುಗಿದಳು; ಅವಾ ಮುನ್ನಡೆದನು. ಸ್ವಲ್ಪ ಹೊತ್ತಿನಲ್ಲೇ ಅವಾ ಜುಸಾಂ ಮುನ್ನೆಚ್ಚರಿಸಿದ್ದ ಸ್ಥಳಕ್ಕೆ ಬಂದನು. ಅಲ್ಲಿ ದಾರಿ ಕವಲೊಡೆಯಿತು. ಅವಳ ಮಾತನ್ನು ನೆನೆದು ಅವನು ಬಲದಾರಿಗೇ ನಡೆದನು; ಅಲ್ಲಿ ಅನೇಕ ಕಂಟಕಗಳೂ ಕೊರಕಲುಗಳೂ ಇದ್ದುದನ್ನು ಕಂಡು, ಎಲ್ಲೋ ಅವಳು ಸೂಚನೆ ಕೊಡುವಾಗ ತಪ್ಪು ಮಾಡಿರಬೇಕು ಎಂದುಕೊಂಡು ಹಿಂದಕ್ಕೆ ಬಂದು ಎಡದಾರಿಯನ್ನು ಹಿಡಿದನು.

ಅವನು ಆ ದಾರಿಯಲ್ಲಿ ಬಲುದೂರ ಸಾಗಿದಮೇಲೆ ಒಂದು ಗುಹೆ ಸಿಕ್ಕಿತು ಅಲ್ಲೊಬ್ಬಳು ಕಪ್ಪುಮೈಯ, ಒಂಟಿಗಣ್ಣು ಒಂಟಿತೋಳು ಒಂಟಿ ಮೊಲೆಗಳುಳ್ಳ ರಾಕ್ಷಸಿ ಕುಳಿತಿದ್ದಳು ಅವನನ್ನು ನೋಡಿದ ಕೂಡಲೆ ಇವಳು ಉರಿಯುವ ಕೊಳ್ಳಿಯೊಂದನ್ನು ಮೇಲೆಸೆದಳು; ಅವನಿಗೆ ನಾಯಿಯ ರೂಪ ಬಂತು.

ನಿರ್ಭಾಗ್ಯ ಅವಾ ಮನೆಗೆ ಹಿಂದಿರುಗಿದನು. ಒಳಗೆ ಹೋಗಲು ಧೈರ್ಯ ಬರಲಿಲ್ಲ. ಬಾಗಿಲ ಮುಂದೆ ತನ್ನ ಮುಂಗಾಲಿನ ಪಂಜಗಳನ್ನು ಹೊಸಿಲ ಮೇಲಿಟ್ಟುಕೊಂಡು ಮಲಗಿದನು. ಆ ಸಮಯಕ್ಕೆ ಸರಿಯಾಗಿ ಮಕ್ಕಳು ಹೊರಗೆ ಬಂದು ನೋಡಿದರು. ಅವನು ಅಲ್ಲಿ ಮಲಗಿರುವುದನ್ನು ಕಂಡು, ತಾಯ ಬಳಿಗೆ ಓಡಿಹೋಗಿ 'ಬಾಗಿಲ ಬಳಿ ಒಂದು ವಿಚಿತ್ರ ಪ್ರಾಣಿ ಮಲಗಿದೆ, ನೋಡು' ಎಂದರು.

ತಾಯಿ ಬೇಗನೆ ಬಂದು ನಾಯಿಯನ್ನು ಕಂಡು, ತಪ್ಪುದಾರಿಗೆ ತಿರುಗಿದ ತನ್ನ ಗಂಡನಿಗೆ ಒದಗಿದ ದುರವಸ್ಥೆಯನ್ನು ಅರಿತಳು. 'ಅವನು ನಿಮ್ಮ ತಂದೆ' ಎಂದು ಮಕ್ಕಳಿಗೆ ಹೇಳಿದಳು.

ಅವರು ಕೇಳಿದರು 'ಇದು ಹೇಗೆ ಮಹಾಪುರುಷನಾದ ನಮ್ಮ ತಂದೆಯಾದೀತು?'

ಜುಸಾಂ ನುಡಿದಳು 'ನನ್ನ ಮಾತಿನಲ್ಲಿ ನಂಬಿಕೆಯಿಲ್ಲದಿದ್ದರೆ ನಿಮ್ಮ ಕೈಮೇಲೆ ಉಗುಳಿಕೊಂಡು ಅದರ ಮುಂದೆ ತೋರಿಸಿ; ಅದು ನೆಕ್ಕಿದರೆ ನಿಮ್ಮ ತಂದೆ ಎಂದು ಅರ್ಥ; ಹಾಗೆ ಮಾಡದಿದ್ದರೆ ಅದು ಬೇರೆ ಯಾವುದೋ ಆಗಿರಬೇಕು.'

ಅವಳ ಸಲಹೆಯಂತೆ ಆ ಮಕ್ಕಳು ಕೈಮೇಲೆ ಉಗುಳಿಕೊಂಡು ಅದನ್ನು ನಾಯಿಯ ಮುಂದೆ ತೋರಿಸಿದವು. ಅದು ತತ್‌ಕ್ಷಣವೇ ನೆಕ್ಕಿತು. ಜುಸಾಂ ಹೇಳಿದಳು 'ನೋಡಿದಿರಾ, ನಾನು ಹೇಳಲಿಲ್ಲವೆ ಅವನು ನಿಜವಾಗಿ ನಿಮ್ಮ ತಂದೆ.'

ಮಕ್ಕಳು ನುಡಿದವು 'ಹೌದು, ನೀನು ಹೇಳಿದ್ದು ಸರಿ. ಅವನು ನಮ್ಮ ತಂದೆ!'

ಜುಸಾಂ ಮಕ್ಕಳಿಗೆ ನಡೆದ ಸಂಗತಿಯನ್ನು ತಿಳಿಸಿದಳು. 'ನಿಮ್ಮ ತಂದೆ ನನ್ನ ತಂದೆಯ ಮನೆಗೆ, ಧಾನ್ಯವನ್ನು ತರುವುದಕ್ಕಾಗಿ ಹೋಗುತ್ತಿರುವಾಗ ಹಿಡಿಯಬಾರದ ದಾರಿಯನ್ನು ಹಿಡಿದರು. ಆದ್ದರಿಂದ ಅವರಿಗೆ ನಾಯಿಯ ರೂಪವೊದಗಿತು. ಈಗ ನಾನು ನಿಮ್ಮಿಬ್ಬರಿಗೂ ಹೇಗೆ ಅನ್ನವನ್ನು ಒದಗಿಸಬೇಕೋ ತಿಳಿಯದು. ಇನ್ನು ನನಗುಳಿದಿರುವುದು ಒಂದೇ ದಾರಿ. ನನ್ನ ತಂದೆಯ ಮನೆಗೆ ಹೋಗುವುದು. ನಾನು ನಿಮಗೆ ಸ್ವಲ್ಪ ಧಾನ್ಯವನ್ನು ಕಳಿಸುತ್ತೇನೆ. ನೀವು ಅದನ್ನು ಬಿತ್ತಿಬೆಳೆದು ನಿಮ್ಮ ಅನ್ನವನ್ನು ಸಂಪಾದಿಸಿಕೊಳ್ಳಿ' ಎಂದಳು.

ಮಕ್ಕಳು ಅಳತೊಡಗಿದವು. ತಮ್ಮ ತಾಯಿಯನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಅವಳೂ ಸಂಜೆಯುತನಕ ಕಾಯಬೇಕಾಯಿತು; ರಾತ್ರಿಯೂಟವಾದಮೇಲೆ ಮಕ್ಕಳನ್ನು ಬೆಚ್ಚಗೆ ಮಲಗಿಸಿ ಯಾರಿಗೂ ತಿಳಿಸದೆ ತನ್ನ ತಂದೆಯ ಮನೆಗೆ ನಡೆದಳು ಜುಸಾಂ.

ಜುಸಾಂ ಮನೆಯಿಂದ ಹೊರಟದ್ದೇ ತಡ, ಕಾಡಿನ ದೆವ್ವಗಳು ಈ ರಕ್ಷಕರಿಲ್ಲದ ಮಕ್ಕಳನ್ನು ತಿಂದುಬಿಡೋಣವೆಂದು ದಂಡುಗಟ್ಟಿ ಬಂದವು. ಆದರೆ ಬಾಗಿಲಲ್ಲಿ ಮಲಗಿದ್ದ ನಾಯಿ ಗಟ್ಟಿಯಾಗಿ ಬೊಗಳಿ ಆ ದೆವ್ವಗಳನ್ನು ಓಡಿಸಿತು. ತಾಯಿ ತಮ್ಮನ್ನು ಬಿಟ್ಟು ಹೊರಟು ಹೋದಳೆಂಬುದು ಬೆಳಗಾದಮೇಲೆ ಅವರಿಗೆ ಗೊತ್ತಾಯಿತು. ಇಬ್ಬರೂ ಅಳುತ್ತಾ ಮಾತಾಡಿಕೊಂಡರು 'ನಾವೂ ಹೋಗೋಣ. ಅವಳೆಲ್ಲಿಗೆ ಹೋಗಿದ್ದರೂ ಸರಿಯೆ ಅವಳನ್ನು ಹಿಂಬಾಲಿಸೋಣ' ಎಂದು ಮಾರ್ಗದರ್ಶನ ಮಾಡಲು ನಾಯಿ ಮುಂದೆ ಹೊರಟಿತು; ಮಕ್ಕಳು ಅದರ ಹಿಂದೆ ಹೊರಟರು. ಅದು ತನಗೆ ತಿಳಿದಷ್ಟು ದೂರ ಅವರನ್ನು ಕರೆದುಕೊಂಡು ಹೋಗಿ, ಆಮೇಲೆ ನಿಂತುಬಿಟ್ಟಿತು. ಮಕ್ಕಳು ದಣಿವಾರಿಸಿಕೊಳ್ಳುತ್ತಿದ್ದಾಗ ನಾಯಿ 'ಅವರು ಸ್ವಲ್ಪಕಾಲ ಮಲಗಿರಲಿ, ನಾನು ಹೋಗಿ ಸರಿಯಾದ ದಾರಿಯನ್ನು ಹುಡುಕಿಕೊಂಡು ಬರುತ್ತೇನೆ' ಎಂದು ನಿಶ್ಚೈಸಿತು.

ಮಕ್ಕಳ ಜೊತೆಗೆ ಯಾರೂ ಇಲ್ಲದಿರುವುದನ್ನು ಕಂಡ ದೆವ್ವಗಳು ಗುಂಪುಕಟ್ಟಿ ಬಂದು ಅವರನ್ನು ತಿಂದುಹಾಕಲು ಹವಣಿಸಿದವು. ನಿದ್ದೆ ತಿಳಿದೆದ್ದ ಮಕ್ಕಳು 'ಸತ್ತೆವೋ ಕೆಟ್ಟೆವೋ' ಎಂದು ಓಡಿದವು.

ಓಟದ ನಡುವೆ ಅವರಿಗೊಂದು ಕರಡಿ ಸಿಕ್ಕಿತು. ಅದು 'ಏನು ವಿಷಯ? ಹೀಗೇಕೆ ಓಡುತ್ತಿದ್ದೀರಿ' ಎಂದು ಕೇಳಿತು. ಕಾಡಿನ ದೆವ್ವಗಳು ತಮ್ಮನ್ನು ಅಟ್ಟಿಸಿಕೊಂಡು ಬರುತ್ತಿರುವುದಾಗಿ ಅವರು ತಿಳಿಸಿದರು. 'ಭಯಪಡಬೇಡಿ, ನಾನು ನಿಮ್ಮನ್ನು ರಕ್ಷಿಸುತ್ತೇನೆ' ಎಂದಿತು ಕರಡಿ. ಅವರನ್ನು ತನ್ನ ಬೆನ್ನಮೇಲೆ ಕೂರಿಸಿಕೊಂಡು ಎತ್ತರವಾದ ಮರವನ್ನು ಹತ್ತಿ ಅದರ ತುದಿಗೊಂಬೆಯ ಮೇಲೆ ಅವರನ್ನು ಭದ್ರಪಡಿಸಿತು; ತಾನು ಇಳಿದು ಬರುವಾಗ ಮರದ ತೊಗಟೆಯನ್ನು ಚೆನ್ನಾಗಿ ಹೆರೆದುಹಾಕಿತು; ಹೀಗೆ ಮಾಡಿದ್ದರಿಂದ ಆ ಮರವನ್ನು ಹತ್ತುವುದು ಯಾರಿಗೂ ಅಸಾಧ್ಯವಾಯಿತು. ಇಷ್ಟನ್ನು ಮಾಡಿ ಕರಡಿ ತನ್ನ ದಾರಿ ಹಿಡಿಯಿತು.

ಕರಡಿ ಕಣ್ಮರೆಯಾದ ಮೇಲೆ ಆ ಮರದ ಬಳಿಗೆ ದೆವ್ವಗಳು ಬಂದವು. ಅದನ್ನು ಹತ್ತಲು ಹೆಣಗಾಡಿದವು. ಮರದ ಕಾಂಡ ತುಂಬಾ ನುಣುಪಾಗಿ ಜಾರುತ್ತಿದ್ದದರಿಂದ ಹತ್ತಿ ಹೋಗುವುದು ಅಸಾಧ್ಯವಾಯಿತು. ಆದ್ದರಿಂದ ಅವು ಮರವನ್ನೇ ತಮ್ಮ ಹಲ್ಲುಗಳಿಂದ ಕತ್ತರಿಸತೊಡಗಿದವು.

ಇದನ್ನೆಲ್ಲ ನೋಡುತ್ತಿದ್ದ ಮಕ್ಕಳು ಮರವನ್ನು ಕುರಿತು 'ಬೀಳುವಾಗ ಬಯಲ ಕಡೆಗೆ ಬೀಳು' ಎಂದು ಕೇಳಿಕೊಂಡರು.

'ಬೆಟ್ಟಗಳ ಕಡೆಗೆ ಬೀಳು' ಎಂದು ದೆವ್ವಗಳು ಅರಚಿದವು. ಕಡೆಗೆ ಮರ ಬಿದ್ದೇ ಹೋಯಿತು. ಮಕ್ಕಳ ಮೇಲಿನ ಕನಿಕರದಿಂದ ಬಯಲ ಕಡೆಗೆ; ಏಕೆಂದರೆ ಬಯಲ ಕಡೆ ದೆವ್ವಗಳಿಗೆ ನಿಷೇಧವಿತ್ತು. ಅವು ಅಲ್ಲಿ ಹೆಜ್ಜೆಯಿಡುವಂತಿರಲಿಲ್ಲ.

ಮಕ್ಕಳಿಗೆ ತಾತ್ಕಾಲಿಕ ರಕ್ಷಣೆಯೇನೋ ಲಭಿಸಿತು. ಆದರೆ ಜೊತೆಗೆ ಯಾರೂ ಇರಲಿಲ್ಲ. ಅವರು ತಮ್ಮಲ್ಲೆ ಮಾತಾಡಿಕೊಂಡರು: 'ಏನಾದರೂ ಮಾಡಿ ನಾವು ತಾಯಿಯನ್ನು ಹುಡುಕಲೇ ಬೇಕು.' ಆ ಸಮಯಕ್ಕೆ ಸರಿಯಾಗಿ ಒಂದು ರಣಹದ್ದು ಹಾರಿ ಬಂದು 'ಏನು ಸಮಾಚಾರ' ಎಂದು ಕೇಳಿತು.

ಅವರು ನಡೆದ ಸಂಗತಿಯನ್ನು ತಿಳಿಸಿದ ಮೇಲೆ ಹದ್ದು ಹೇಳಿತು; 'ಪ್ರತಿದಿನವೂ ಶವಗಳನ್ನು ಹುಡುಕಿ ಅವುಗಳ ರಕ್ತವನ್ನು ಶೇಖರಿಸಿ ಸೂರ್ಯನ ಮನೆಗೊಯ್ಯುವುದು ನನ್ನ ಪಾಲಿಗೆ ಬಂದ ಕರ್ತವ್ಯವಾಗಿದೆ.'

ಮಕ್ಕಳು ಹೇಳಿದರು 'ನಾವು ಹೋಗಬೇಕಾಗಿರುವುದೂ ಸೂರ್ಯನ ಮನೆಗೇ. ನಮ್ಮ ತಾಯಿ ಸೂರ್ಯನ ಮಗಳು. ಅಲ್ಲಿಗೆ ನಮ್ಮನ್ನು ಕರೆದುಕೊಂಡು ಹೋಗು.'

ಹದ್ದು ಉತ್ತರಿಸಿತು. 'ಏಕಕಾಲದಲ್ಲಿ ನಿಮ್ಮಿಬ್ಬರ ಭಾರವನ್ನೂ ಹೊತ್ತು ಹಾರುವುದು ನನಗೆ ಸಾಧ್ಯವಿಲ್ಲ. ನಿಮ್ಮಿಬ್ಬರಲ್ಲಿ ಒಬ್ಬನನ್ನು ಕರೆದುಕೊಂಡು ಹೋಗುತ್ತೇನೆ.'

ಅದು ಸಿಬ್ಜಿಂ ಸಾಮಳನ್ನು ತನ್ನ ಬೆನ್ನಮೇಲೆ ಕೂರಿಸಿಕೊಂಡು ಸೂರ್ಯನ ಮನೆಗೆ ಹಾರಿತು. ಮಗಳನ್ನು ಕಂಡು ಜುಸಾಮಳಿಗೆ ಅಮಿತ ಸಂತೋಷವಾಯಿತು. ಅವಳಿಗೆ ಒಂದು ದೊಡ್ಡ ಬುಟ್ಟಿಯ ತುಂಬ ಧಾನ್ಯವನ್ನು ಕೊಟ್ಟು, ಅವಳ ಜಡೆಗೆ ಒಂದು ಹಗ್ಗವನ್ನು ಕಟ್ಟಿ ಭೂಮಿಗೆ ಇಳಿಯಬಿಟ್ಟು ಅವರ ಮನೆಯ ಮುಂದುಗಡೆ ನಿಲ್ಲಿಸಿದಳು. ಸಿಬ್ಜಿಂಸಾಂ ಒಳಗೆ ಹೋಗಿ ಒಂದಿಷ್ಟು ಕಾಳನ್ನು ಬೇಯಿಸಿ ಸಾರಾಯಿಯನ್ನು ತಯಾರಿಸಿ, ಹೊರಗೆ ಬಂದು ತನ್ನ ಸೋದರನ ಆಗಮನವನ್ನೇ ನಿರೀಕ್ಷಿಸುತ್ತ ಕುಳಿತಳು.

ಅತ್ತ ಸಿಬ್ಜಿ ಸಾವೊ ತನ್ನನ್ನು ಬಿಟ್ಟುಹೋದ ಬಳಿಯಲ್ಲೇ ಬಹುಕಾಲ ಎಲ್ಲಿಗೆ ಹೋಗಬೇಕೆಂಬುದು ತಿಳಿಯದೆ ನಿಂತಿದ್ದನು. ಅವನು ಹೀಗೆ ದಿಗ್‌ಭ್ರಾಂತನಾಗಿ ನಿಂತಿರುವ ಸಮಯಕ್ಕೆ ಅವನ ತಂದೆ, ಅವರಿಗಾಗಿ ಸೀಮೆಯ ಮೇಲೆಲ್ಲ ಹುಡುಕುತ್ತಾ ಹೋಗಿದ್ದವನು, ಬಂದು ಕೂಡಿಕೊಂಡನು. ಸಿಬ್ಜಿ ಸಾವೋವನ್ನು ಕಂಡಕೂಡಲೆ ನಾಯಿಯ ರೂಪದಲ್ಲಿದ್ದ ಅವನ ತಂದೆ ಪ್ರೀತಿಯಿಂದ ಎಗರಿ ಅವನ ಮುಖವನ್ನು ನೆಕ್ಕಿ ಬೊಗಳುತ್ತಾ ಬಾಲವಲ್ಲಾಡಿಸುತ್ತಾ ಅವನನ್ನು ಮನೆಗೆ ಕರೆದುಕೊಂಡು ಹೋದನು. ಅವರು ಮನೆಗೆ ಬರುವ ಹೊತ್ತಿಗೆ ಸಿಬ್ಜಿಂ ಸಾಂ ಊಟಕ್ಕೆ ಎಲ್ಲವನ್ನೂ ಅಣಿಮಾಡಿದ್ದಳು. ಚೆದರಿ



ಹೋಗಿದ್ದವರು ಮತ್ತೆ ಒಂದೆಡೆ ಸೇರಿದ ಸಂತೋಷಕ್ಕಾಗಿ ಯಥೇಚ್ಛವಾಗಿ ಸಾರಾಯಿಯನ್ನು ನೀಡಿದಳು.

# ಸಂಶೋಧನೆಗಳು

## ಮನೆಯನ್ನು ಕಟ್ಟುವುದು ಹೇಗೆ

ಪುರಾತನ ಕಾಲದಲ್ಲಿ ತಮ್ಮ ಪೂರ್ವಜರು ಹೇಗೆ ವಾಸಿಸುತ್ತಿದ್ದರೆಂಬ ವಿಷಯದಲ್ಲಿ ಗಿರಿಜನರು ಅನೇಕ ಕಥೆಗಳನ್ನು ಹೇಳುತ್ತಾರೆ. ಕೆಲವರು ಗುಹೆಗಳಲ್ಲಿ ಮನೆ ಮಾಡಿದ್ದರು; ಇನ್ನು ಕೆಲವರು ಮರಗಳ ಮೇಲೆ ಹಕ್ಕಿಗಳಂತೆ ಬಾಳಿದರು; ಮತ್ತೆ ಕೆಲವರು ಪರ್ಣ ಶಾಲೆಗಳಲ್ಲಿ ವಾಸಿಸುತ್ತಿದ್ದರು. ಒರಿಸ್ಸಾದ ಸೌರರು ಒಂದು ರೀತಿಯಲ್ಲಿ ಆ ಕಾಲದ ಸ್ಥಿತಿಗತಿಗಳನ್ನು ವರ್ಣಿಸುತ್ತಾರೆ.

ಮೊದಲಿಗೆ ಮಾನವರು ಮರಗಳ ಕೆಳಗೆ ವಾಸಮಾಡುತ್ತಿದ್ದರು; ಅವರು ಸುಮಾರು ಎರಡಡಿಯೆತ್ತರದ ಕುಳ್ಳರಾಗಿದ್ದರು. ಮಳೆಗಾಲದಲ್ಲಿ ಅವರ ಬದುಕು ತುಂಬಾ ಕಷ್ಟಕ್ಕೆ ಸಿಕ್ಕಿಬೀಳುತ್ತಿತ್ತು. ಆದ್ದರಿಂದ ಅವರು ನೆಲದಲ್ಲಿ ಬಿಲಗಳನ್ನು ಕೊರೆದು ಮೊಲಗಳಂತೆ ಬದುಕುತ್ತಿದ್ದರು. ಆಗ ಚಾವಣಿಯೇ ಕುಸಿದು ಅವರನ್ನು ಭೂಗತ ಮಾಡುತ್ತಿತ್ತು; ಇದರಿಂದ ಪ್ರಪಂಚದ ಜನಸಂಖ್ಯೆ ಇಳಿಮುಖವಾಗುತ್ತ ಬಂತು.

ಬಹುಕಾಲದ ಮೇಲೆ ಜಂಗುಸಾರನೆಂಬ ಮಾನವನಿಗೆ ಗೃಹನಿರ್ಮಾಣದ ಆಲೋಚನೆ ಹೊಳೆಯಿತು. ಅವನು ಒಂಟಿ ಕಂಬದ ಆಧಾರದ ಮೇಲೆ ನಿಂತ, ತೆರೆದ ಕೊಡೆಯಂತೆ ವರ್ತುಳಾಕಾರದ ಚಾವಣಿಯುಳ್ಳ – ಆದರೆ ಗೋಡೆಗಳಿಲ್ಲದ – ಮನೆಯೊಂದನ್ನು ಈಚಲುಗರಿಗಳ ನೆರವಿನಿಂದ ಕಟ್ಟಿದನು. ಈ ಬಗೆಯ ನಿವಾಸಗಳಲ್ಲೇ ಮಾನವರು ಬಹುಕಾಲ ಬಾಳಿದರು; ಇಂದಿಗೂ ಸೌರರು ಈ ವಿಧಾನವನ್ನೇ ಅನುಸರಿಸಿ ಚಿಕ್ಕ ಗುಡಿಗಳನ್ನು ಕಟ್ಟುತ್ತಾರೆ. ಆಮೇಲೆ ಅವರು ಮರಮುಟ್ಟನಿಂದಾಗಲಿ ಮಣ್ಣಿನಿಂದಾಗಲಿ ಸೌಕರ್ಯವಾಗಿ, ಶೀತಾಸ್ಪದ ವಿಲ್ಲದ ಬೆಚ್ಚನೆಯ ಮನೆಗಳನ್ನು ಕಟ್ಟಿದರು. ಕಡೆಗೆ ನೆರಹೊರಕೆಯ ಅಪೇಕ್ಷೆಯಿಂದ ಒಟ್ಟುಗೂಡಿ ಹಳ್ಳಿಗಳಲ್ಲಿ ಮನೆಗಳನ್ನು ಕಟ್ಟಿದರು.

ಮೊದಲ ಮಾನವರು ಮನೆಕಟ್ಟುವ ವಿಧಾನವನ್ನು ವಿವಿಧ ಪ್ರಾಣಿವರ್ಗದಿಂದ ಹೇಗೆ ಕಲಿತರೆಂಬ ವಿಷಯದಲ್ಲಿ ಈಶಾನ್ಯ ಭಾರತದ ಸಿಂಗ್‌ಫೋಗಳು ಒಂದು ನೀಳ್ಗತೆಯನ್ನು ಹೇಳುತ್ತಾರೆ.

ಮಾನವರು ಗುಹೆಗಳಲ್ಲೂ ಮರಗಳ ಕೆಳಗೂ ವಾಸಿಸುತ್ತಿದ್ದ ಕಾಲದಲ್ಲಿ ಕಿಂದ್ರು–ಲಲೀಂ ಮತ್ತು ಕಿಂಚ ಲಲಿ–ದಾಂ ಎಂಬ ಗೆಳೆಯರಿಬ್ಬರು ತಮ್ಮ ವಾಸಕ್ಕಾಗಿ ಮನೆಯನ್ನು ಕಟ್ಟಲು ನಿರ್ಧರಿಸಿದರು. ಪಾಪ! ಅವರಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ; ಈ ವಿಷಯದಲ್ಲಿ ಪ್ರಾಣಿವರ್ಗದ ಸಲಹೆಯನ್ನು ಪಡೆಯಲು ಅವರು ಅರಣ್ಯಕ್ಕೆ ಹೋದರು.

ದಾರಿಯಲ್ಲಿ ಅವರಿಗೆ ಮೊತ್ತ ಮೊದಲು ಆನೆ ಸಿಕ್ಕಿತು. ಅವರು ಅದನ್ನು ಕೇಳಿದರು: 'ನಾವು ಒಂದು ಮನೆಯನ್ನು ಕಟ್ಟಬೇಕಾಗಿದೆ; ಅದನ್ನು ಕಟ್ಟುವುದು ಹೇಗೆ ಎಂಬುದನ್ನು ತಿಳಿಸುವೆಯಾ?'

ಆನೆ ಹೇಳಿತು 'ನನ್ನ ಕಾಲುಗಳಂತೆ ಬಲವಾಗಿರುವ ದಪ್ಪವಾಗಿರುವ ಮರದ ಕಂಬಗಳನ್ನು ಮಾಡಿಕೊಳ್ಳಿ.'

'ಆಮೇಲೆ ಏನು ಮಾಡಬೇಕು?' ಎಂದರವರು.

ಆನೆ ಉತ್ತರಿಸಿತು 'ಅದು ನನಗೆ ಸ್ವಲ್ಪವೂ ತಿಳಿಯದು,'

ಗೆಳೆಯರಿಬ್ಬರೂ ಮುಂದೆ ಹೋದರು; ಹಾವು ಸಿಕ್ಕಿತು. ಅವರು ಅದನ್ನು ಕೇಳಿದರು 'ನಾವು ಒಂದು ಮನೆಯನ್ನು ಕಟ್ಟಬೇಕಾಗಿದೆ; ಅದನ್ನು ಕಟ್ಟುವುದು ಹೇಗೆ ಎಂಬುದನ್ನು ತಿಳಿಸಬಲ್ಲೆಯಾ? ಆನೆ ನಮಗೆ ಹೇಳಿತು, ತನ್ನ ಕಾಲುಗಳಂತೆ ಬಲವಾಗಿರುವ ದಪ್ಪವಾಗಿರುವ ಮರದ ಕಂಬಗಳನ್ನು ಮಾಡಿಕೊಳ್ಳಿ ಎಂದು; ಅದಕ್ಕೆ ಗೊತ್ತಿರುವುದು ಅಷ್ಟೇ!'

ಹಾವು ಹೇಳಿತು 'ನನ್ನ ಹಾಗಿರುವ ಉದ್ದವಾದ, ತೆಳ್ಳನೆಯ ಕೋಲುಗಳನ್ನು ಮಾಡಿಕೊಳ್ಳಿ.'

ಅವರು ಕೇಳಿದರು 'ಆಮೇಲೆ ಏನು ಮಾಡಬೇಕು?'

ಹಾವು ಉತ್ತರಿಸಿತು 'ಅದು ನನಗೆ ಸ್ವಲ್ಪವೂ ತಿಳಿಯದು.'

ಅವರು ಮುಂದೆ ಸಾಗಿದರು. ಅವರಿಗೆ ಎಮ್ಮೆ ಸಿಕ್ಕಿತು. ಅದರ ಪಕ್ಕದಲ್ಲಿ ಕೋಣನ ಶವ ಬಿದ್ದಿತ್ತು. ಇತರ ಮೃಗಗಳು ಅದರ ಚರ್ಮ ಮಾಂಸಗಳನ್ನು ತಿಂದು ಮುಗಿಸಿದ್ದವು. ಅಸ್ಥಿಪಂಜರ ಮಾತ್ರ ಉಳಿದಿತ್ತು.

ಇಬ್ಬರೂ ಆ ಎಮ್ಮೆಯನ್ನು ಕೇಳಿದರು 'ನಾವು ಒಂದು ಮನೆಯನ್ನು ಕಟ್ಟಬೇಕಾಗಿದೆ; ಅದನ್ನು ಕಟ್ಟುವುದು ಹೇಗೆ ಎಂಬುದನ್ನು ತಿಳಿಸಬಲ್ಲೆಯಾ? ಆನೆ ತನ್ನ ಕಾಲುಗಳಂತೆ ಬಲವಾಗಿರುವ ದಪ್ಪವಾಗಿರುವ ಮರದ ಕಂಬಗಳನ್ನು ಮಾಡಿಕೊಳ್ಳಿ ಎಂದು ನಮಗೆ ಹೇಳಿತು; ಹಾವು ತನ್ನ ಹಾಗೆ ಉದ್ದವಾದ ತೆಳ್ಳನೆಯ ಕೋಲುಗಳನ್ನು ಮಾಡಿಕೊಳ್ಳಿ ಎಂದಿತು. ನಾವು ಮುಂದೇನು ಮಾಡಬೇಕು?'

ಎಮ್ಮೆ ಸತ್ತ ಕೋಣನನ್ನು ಅವರಿಗೆ ತೋರಿಸಿ 'ಅಡ್ಡ ಕೋಲುಗಳನ್ನು ಇಟ್ಟು ಈ ಅಸ್ಥಿಪಂಜರದ ಮೂಳೆಗಳಿರುವಂತೆ ಚಾವಣಿಯನ್ನು ರಚಿಸಿ.'

'ಆಮೇಲೆ ಏನು ಮಾಡಬೇಕು?' ಎಂದರವರು.

ಎಮ್ಮೆ ಉತ್ತರಿಸಿತು 'ಅದು ನನಗೆ ಸ್ವಲ್ಪವೂ ತಿಳಿಯದು'.

ಅವರು ಇನ್ನೂ ಮುಂದೆ ಹೋದರು; ಮೀನು ಸಿಕ್ಕಿತು. ಅವರು ಅದನ್ನು ಕೇಳಿದರು 'ನಾವು ಒಂದು ಮನೆಯನ್ನು ಕಟ್ಟಬೇಕಾಗಿದೆ. ಆನೆ ತನ್ನ ಕಾಲುಗಳಂತೆ ಬಲವಾಗಿರುವ ದಪ್ಪವಾಗಿರುವ ಮರದ ಕಂಬಗಳನ್ನು ಮಾಡಿಕೊಳ್ಳಿ ಎಂದಿತು; ಹಾವು ತನ್ನ ಹಾಗೆ ಉದ್ದವಾದ, ತೆಳ್ಳನೆಯ ಕೋಲುಗಳನ್ನು ಮಾಡಿಕೊಳ್ಳಿ ಎಂದಿತು; ಎಮ್ಮೆ, ಅಡ್ಡ ಕೋಲುಗಳನ್ನು ಅಸ್ಥಿಪಂಜರದ ಮೂಳೆಗಳಂತೆ ಚಾವಣಿಯನ್ನು ರಚಿಸಿ ಎಂದಿತು. ನಾವು ಈಗ ಏನು ಮಾಡಬೇಕು?'

ಮೀನು ಹೇಳಿತು 'ನನ್ನ ಬೆನ್ನಮೇಲಿನ ಪೊರೆಗಳನ್ನು ನೋಡಿ, ರಾಶಿಗಟ್ಟಲೆ ಎಲೆಗಳನ್ನು ಚಾವಣಿಯ ಮೇಲೆ ಈ ಪೊರೆಗಳ ಮಾದರಿಯಲ್ಲಿ ಒಂದರಮೇಲೊಂದರಂತೆ ಪೇರಿಸಿ.'

ಇವಿಷ್ಟನ್ನೂ ಕೇಳಿದ ಆ ಗೆಳೆಯರು ತಮ್ಮ ನೆಲೆಗೆ ಹಿಂದಿರುಗಿ ಮೊತ್ತಮೊದಲ ಮನೆಯನ್ನು ಕಟ್ಟಿದರು.

## ಸುತ್ತಿಗೆ ಮತ್ತು ಇಕ್ಕಳ

ಇಂಟುಪ್ಪ ಒಬ್ಬ ಶಿಲ್ಪಿ. ಮರವನ್ನು ಕೊಯ್ಯಲು ಅವನು ಬಳಸುತ್ತಿದ್ದ ಸಾಧನ ಚೂಪು ಕಲ್ಲುಗಳು; ಅದನ್ನು ಬಳಸಿ ಒಪ್ಪಾಗಿ ಕೆಲಸಮಾಡುವುದು ಸಾಧ್ಯವಿರಲಿಲ್ಲ. ತನಗೆ ಬೇಕಾದ ಒಳ್ಳೆಯ ಹತಾರನ್ನು ಹುಡುಕಲು ಅವನು ಕಾಡಿಗೆ ಹೋದನು.

ಕಬ್ಬಿಣ ಎಂಬ ಯಾವುದೋ ಹೆಸರಿನ ಪದಾರ್ಥವನ್ನು ಅವನು ಕನಸಿನಲ್ಲಿ ಕಂಡಿದ್ದನು. ಅದೆಲ್ಲಿ ಸಿಕ್ಕುತ್ತದೆ ಎಂದವನು ಸಿಕ್ಕಿದ ಮರಗಿಡಗಳನ್ನು ಕೇಳುತ್ತಿದ್ದನು. 'ನಾವದನ್ನು ನಿನಗೆ ಹೇಳಿದರೆ ನೀನು ಕೊಡಲಿಯನ್ನು ಮಾಡಿಕೊಂಡು ನಮ್ಮನ್ನು ಮುಗಿಸಿ ಬಿಡುತ್ತೀಯೆ' ಎಂದು ಅವು ಹೇಳುತ್ತಿದ್ದವು.

ಅವನು ಇದೇ ಪ್ರಶ್ನೆಯನ್ನು ಹುಲ್ಲಿನ ಮುಂದೆ ಎತ್ತಿದನು; ಅದು ಅದೇ ಉತ್ತರವನ್ನು ಕೊಟ್ಟಿತು.

ಕಬ್ಬಿಣವೆಲ್ಲಿ ಸಿಕ್ಕುತ್ತದೆ ಎಂದು ಅವನು ಕಾಡುಮೃಗಗಳನ್ನು ಕೇಳಿದನು. 'ನಾವು ನಿನಗೆ ಹೇಳಿದರೆ ನೀನು ಬಾಣಗಳನ್ನು ಮಾಡಿಕೊಂಡು ನಮ್ಮನ್ನು ಕೊಂದುಬಿಡುತ್ತೀಯೆ' ಎಂದು ಅವೂ ಹೇಳಿದವು.

ಕಟ್ಟಕಡೆಗೆ ಅವನು ನೀರಿಗೂ ಇದೇ ಪ್ರಶ್ನೆಯನ್ನು ಹಾಕಿದನು. ನೀರು ನುಡಿಯಿತು 'ನಮ್ರಾಂಗ್ ನಿಂಗಪೂಗೆ ಹೋಗು. ಅಲ್ಲಿ ನಿನಗೆ ಕಬ್ಬಿಣ ಸಿಕ್ಕುತ್ತದೆ.'

ಇಂಟುಪ್ಪ ಅಲ್ಲಿಗೆ ಹೋದನು; ಅಲ್ಲೂ ಕಬ್ಬಿಣ ಸಿಕ್ಕಲಿಲ್ಲ. ಆದರೆ ಅಲ್ಲೊಬ್ಬಳು ದೇವತೆ ಇದ್ದಳು; ಮತ್ತು ಅದೇ ರಾತ್ರಿ ಅವಳು ಮಲಗಿದ್ದ ಹಾಗೆಯೇ ಒಂದು ಮಗುವನ್ನು ಹೆತ್ತಳು.

ಹುಟ್ಟಿದಾಗ ಮಗು ಬೆಂಕಿಯಂತೆ ಕೆಂಪಾಗಿತ್ತು; ಆರಿದಂತೆಲ್ಲ ಅದು ಕಬ್ಬಿಣದಂತೆ ಕಪ್ಪಗಾಯಿತು. ಇಂಟುಪ್ಪ ಅದರ ಒಂದು ಚೂರನ್ನು ಕತ್ತರಿಸಿಕೊಂಡು ಮನೆಗೆ ತಂದನು. ಮಗು ಆಮೇಲೆ ನೂರು ಚೂರಾಯಿತು; ಒಂದು ಹೊಳೆ ಆ ಚೂರುಗಳನ್ನು ಕೊಚ್ಚಿಕೊಂಡು ಹೋಗಿ ಲೋಕದ ಮೇಲೆಲ್ಲ ಹರಡಿತು. ಆಮೇಲೆ ನೋಡಿದರೆ, ಎಲ್ಲೆಲ್ಲೂ ಕಬ್ಬಿಣ.

ಆದರೆ ತಾನು ಹುಡುಕಿ ತಂದ ಕಬ್ಬಿಣವನ್ನು ಹೇಗೆ ಉಪಯೋಗಿಸಬೇಕೆಂಬುದೇ ಇಂಟುಪ್ಪನಿಗೆ ಹೊಳೆಯಲಿಲ್ಲ. ಮನೆಯ ಮುಂದೆ ಹಾಗೆಯೇ ಕುಳಿತಿದ್ದನು. ಅಲ್ಲಿಗೆ ಒಂದು ಆನೆ ಬಂತು. ತನ್ನ ಕಾಲಿನ ಕೆಳಗೆ ಸಿಕ್ಕಿದ್ದನ್ನೆಲ್ಲ ಪುಡಿಪುಡಿ ಮಾಡುತ್ತ ಬರುತ್ತಿದ್ದ ಆನೆಯನ್ನು ಕಂಡಾಗ ಕಲ್ಲಿನಿಂದ ಸುತ್ತಿಗೆಯನ್ನು ಮಾಡುವುದನ್ನು ಅವನು ಕಲಿತನು. ಆಮೇಲೆ ಕಬ್ಬಿಣವನ್ನು ಚೆನ್ನಾಗಿ ಕಾಯಿಸಿದನು. ಆದರೆ ಅದನ್ನು ಹಿಡಿಯಲು ಉಪಕರಣವೇನೂ ಇರಲಿಲ್ಲ. ಹೆಣಗಿ ಹೋರಾಡಿದನು; ಅವನಿಗೆ ತುಂಬಾ ಬಾಯಾರಿಕೆಯಾಯಿತು. ನೀರು ಕುಡಿಯಲು ಹೊಳೆಗೆ

ಹೋದನು. ನೀರು ಕುಡಿಯುತ್ತಿದ್ದಾಗ ನಳ್ಳಿ ಅವನನ್ನು ಹಿಡಿಯಿತು. ನೋವಿನಿಂದ ಎಗರಿದನು. ಆದರೂ ಅದರ ಕೊಂಡಿಗಳನ್ನು ಕಂಡಾಗ ಅವನಿಗೆ ತಾನು ಬಯಸಿದ ವಸ್ತು ಸಿಕ್ಕಿತೆಂದು ನೆಮ್ಮದಿಯಾಯಿತು. ಮೊದಲು ಒಂದು ಇಕ್ಕಳವನ್ನು ಮಾಡಿಕೊಂಡನು. ಅನಂತರ ಕೊಡಲಿಗಳನ್ನೂ ಚೂರಿಗಳನ್ನೂ ಬಾಣದಲಗುಗಳನ್ನೂ ತಯಾರಿಸಿದನು.

## ವಸ್ತ್ರೋದಯ

ಆದಿಯಲ್ಲಿ ಮಾನವರು ವಸ್ತ್ರಗಳನ್ನು ಧರಿಸುತ್ತಿರಲಿಲ್ಲ; ಬಟ್ಟೆಯ ನೆಯ್ಗೆ ಅವರಿಗೆ ತಿಳಿದಿರಲಿಲ್ಲ. ಹಂಬ್ರುಮಾಯ್ ಎಂಬ ಹೆಸರಿನ ಹುಡುಗಿಯೇ ಮೊತ್ತಮೊದಲ ನೇಕಾರಳು. ಅವಳಿಗೆ ಇದನ್ನು ಮಟಾಯ್ ದೇವತೆ ಹೇಳಿಕೊಟ್ಟಳು. ಆ ಹುಡುಗಿ ಹೊಳೆಯಂಚಿನಲ್ಲಿ ಕುಳಿತು ನೀರಿನ ಅಲೆತೆರೆಗಳನ್ನು ಗಮನವಿಟ್ಟು ನೋಡಿ ಅವುಗಳ ವಿವಿಧ ಶೈಲಿಯನ್ನು ತನ್ನ ನೆಯ್ಗೆಯಲ್ಲಿ ಅನುಕರಿಸಿದಳು; ಕಾಡಿನಲ್ಲಿ ಹುಲ್ಲಿನ ಮೇಲೆ ಮಲಗಿ ಮರಗಳ ಕೊಂಬೆ ರೆಂಬೆಗಳೂ ಬಿದಿರೆಲೆಗಳೂ ರಚಿಸುವ ನಾನಾ ನಮೂನೆಗಳನ್ನು ಕಂಡುಕೊಂಡಳು; ಗಿಡ ಬಳ್ಳಿ ಹೊದರು ಹೂಗಳ ಪರಿಪರಿಯ ಸೊಬಗನ್ನು ಅರಿತಳು; ಅವುಗಳ ನೆರವಿನಿಂದ ಇತರ ನಮೂನೆಗಳನ್ನು ಕಲಿತಳು. ಅವಳ ಕೃತಿಯೂ ಅವಳ ರೂಪದಷ್ಟೇ ಸುಂದರವಾಗಿತ್ತು. ತರುಣರನೇಕರು ಅವಳನ್ನು ಮದುವೆಯಾಗಲು ಆಸೆಪಡುತ್ತಿದ್ದರು.



ಒಂದು ದಿನ ಮುಳ್ಳುಹಂದಿ ಹ್ಯೆರಂ ಅವಳು ಹರವಿದ್ದ ಬಟ್ಟೆಗಳನ್ನು ಕಂಡು ಕದಿಯಲು ಅವಳ ಗುಹೆಯ ಬಳಿಗೆ ಬಂದು, ಅದರ ಚಿಕ್ಕ ಬಾಗಿಲನ್ನು ತೂರುವುದು ತನ್ನಿಂದ ಸಾಧ್ಯವಾಗದೆ ಇಡೀ ಬಂಡೆಯನ್ನು ಹೊಳೆಗೆ ನೂಕಿತು; ಹುಡುಗಿ ಅದರ ಕೆಳಗೆ ಸಿಕ್ಕಿ ಜಜ್ಜಿಹೋದಳು. ಅವಳ ಮಗ್ಗ ಶತಚ್ಛಿದ್ರವಾಯಿತು. ಹೊಳೆ ಆ ಚೂರುಗಳನ್ನು ತೇಲಿಸಿಕೊಂಡು ಹೋಗಿ ಬಯಲಿಗೆ ತಂದೆಸೆಯಿತು. ಅವು ಅಲ್ಲಿಯ ಜನರ ಕೈಗೆ ಸಿಕ್ಕಿದವು; ಅವರು ನೆಯ್ಗೆಯನ್ನು ಕಲಿತರು. ಅವಳ ನೆಯ್ಗೆಯ ನಮೂನೆಗಳು ಬಣ್ಣದ ಚಿಟ್ಟೆಗಳಾದವು; ಅವಳು ಕಂಡುಹಿಡಿದ ನಮೂನೆಗಳ ಗುರುತುಗಳನ್ನು ನೀವು ಅವುಗಳ ರೆಕ್ಕೆಗಳ ಮೇಲೆ ಈಗಲೂ ಕಾಣಬಹುದು.

ಈಶಾನ್ಯ ಭಾರತದ ಮಿಷ್ಮಿಗಳು ಈ ಕಥೆಯನ್ನು ಹೇಳುತ್ತಾರೆ. ಇದಕ್ಕಿಂತ ಸ್ವಲ್ಪಮಟ್ಟಿಗೆ ಬೇರೆಯಾದ ಇನ್ನೊಂದು ಕಥೆಯೂ ಅವರಲ್ಲಿದೆ.

ಖಮ್‌ಲಾಂಗ್ ನದಿಯಲ್ಲಿ ಹಮ್‌ಬ್ರು ಎಂಬ ಹೆಸರಿನ ಮೀನೊಂದಿತ್ತು. ಅದರ ಮೈಮೇಲೆ ಹೂಗಳ ಮಚ್ಚೆಗಳಿದ್ದವು; ಅದರ ಜೊತೆಯಲ್ಲಿ ಕೆಂಪು ಬಿಳಿ ನೀಲಿ ಬಣ್ಣಗಳ ಮೈಯುಳ್ಳ ಹಾವೊಂದಿತ್ತು. ಈ ಮೂರು ಬಣ್ಣಗಳೂ ಮೋಡಗಳಲ್ಲಿ ಪ್ರತಿಬಿಂಬಿತವಾಗಿವೆ.

ಕೊವೊನ್ಸಾ ಎಂಬ ಹೆಸರಿನ ತಬ್ಬಲಿ ಹುಡುಗನೊಬ್ಬನಿದ್ದನು. ಮೀನು ಹಿಡಿಯುವುದೆಂದರೆ ಅವನಿಗೆ ತುಂಬಾ ಆಸೆ. ಆದರೆ ಅವನಿಗೆ ಬೇಸಾಯದ ಕೆಲಸವೇ ವಿಪರೀತವಾಗಿತ್ತು. ಮೀನು ಹಿಡಿಯಲು ವಿರಾಮವೇ ಇರಲಿಲ್ಲ. 'ಯಾವುದಾದರೂ ಮೀನನ್ನು ಹಿಡಿಯುವ ಅದೃಷ್ಟ ನನ್ನ ಪಾಲಿಗೆ ಇರುವುದಾದರೆ, ಮೀನುಗಳು ತಮ್ಮಷ್ಟಕ್ಕೇ ತಾವೇ ನನ್ನ ಬಳಿಗೆ ಬರುತ್ತವೆ' ಎಂದುಕೊಂಡು, ಒಂದು ದಿನ ಅವನು ಹೊಳೆಯಲ್ಲಿ ಬಲೆಯನ್ನು ಬೀಸಿದನು. ಮರುದಿನ ಬೆಳಗಾಗ ಅವನು ತನ್ನ ಬಲೆಯ ಬಳಿಗೆ ಹೋಗಿ ನೋಡಿದಾಗ ಅದರೊಳಗೆ ಹಂಬ್ರು ಜಾತಿಯ ಒಂದು ದೊಡ್ಡ ಮೀನೂ, ಇನ್ನೊಂದು ಚಿಕ್ಕ ಮೀನೂ ಬಿದ್ದಿದ್ದವು. ದೇವತೆಗಳ ಒಲವು ತನ್ನ ಕಡೆಗಿದೆ ಎಂದುಕೊಂಡನು.

ಕೊವೊನ್ಸಾ ಚಿಕ್ಕ ಮೀನನ್ನು ಬೇಯಿಸಿ ತಿಂದನು. ದೊಡ್ಡ ಮೀನು ತುಂಬಾ ಸುಂದರವಾಗಿತ್ತು. ಅವನು ಅದನ್ನು ಒಂದು ಸೋರೆಯ ಬುರುಡೆಯಲ್ಲಿ ಬಚ್ಚಿಟ್ಟನು. ಮರುದಿನ ಹೊಲಗೆಯ್ಮೆಯಿಂದ ಹಿಂದಿರುಗಿದಾಗ, ತನ್ನ ಪುಟ್ಟ ಗುಡಿಸಲ ತುಂಬ ಮೀನಿನ ಪೊರೆಗಳ ಮತ್ತು ಹಾವಿನ ಮೈಬಳೆಗಳ ನಮೂನೆಗಳುಳ್ಳ ಸುಂದರ ವಸ್ತ್ರಗಳು ತುಂಬಿ ಹೋಗಿರುವುದನ್ನು ಕಂಡನು. ಅವನಿಗೆ ಭಯವಾಗಲಿಲ್ಲ. ಆಶ್ಚರ್ಯವಾಯಿತು. ಏಕೆಂದರೆ ಹಿಂದೆಂದೂ ಅವನು ಬಟ್ಟೆಬರೆಗಳನ್ನು ಕಂಡಿರಲಿಲ್ಲ; ಅವನಿಗೇ ಏನು? ಯಾರಿಗೂ ಅದರ ವಿಷಯ ತಿಳಿದಿರಲಿಲ್ಲ. ಹೀಗೆ ಒಂದಿಷ್ಟು ಕಾಲ ನಡೆಯಿತು; ಅವನು ಪ್ರತಿ ದಿನವೂ ಮೀನಿಗೆ ತಿಂಡಿ ಕೊಡುತ್ತಿದ್ದನು, ತನ್ನ ಕೆಲಸದ ಮೇಲೆ ಹೋಗುತ್ತಿದ್ದನು; ಹಿಂದಿರುಗಿ ನೋಡಿದಾಗ ಮನೆಯಲ್ಲಿ ಹೆಚ್ಚು ಹೆಚ್ಚು ಬಟ್ಟೆರಾಶಿ ಬಿದ್ದಿತ್ತು. ಒಂದು ದಿನ ಇದರ ರಹಸ್ಯವನ್ನು ತಿಳಿಯಲೇಬೇಕೆಂದು, ಆಚೆಗೆ ಹೋದಹಾಗೆ ಮಾಡಿ ಮನೆಯ ಹೊರಗೇ ಹೊಂಚು ಹಾಕುತ್ತಿದ್ದನು. ಹಾಗೆಯೇ ಒಮ್ಮೆ ಇಣುಕಿನೋಡಿದರೆ, ಆ ಮೀನು ಸೋರೆಯ ಬುರುಡೆಯಿಂದ ಈಚೆಗೆ ಬಂದು ನಿಡುಜಡೆಯ ನಿಜದ ಹೆಣ್ಣಾಗಿ, ಮಗ್ಗವನ್ನು ತಂದಿಟ್ಟು ಅತ್ಯಲ್ಪ ಕಾಲದಲ್ಲಿ ಬಗೆಬಗೆಯ ವಸ್ತ್ರಗಳನ್ನು ನೇಯುತ್ತಿತ್ತು.

ಅವನು ಸರಕ್ಕನೆ ಒಳಗೆ ಹೋಗಿ ಅವಳನ್ನು ಹಿಡಿದುಕೊಂಡು 'ನೀನು ಯಾರು? ಯಾವ ಪಂಗಡಕ್ಕೆ ಸೇರಿದವಳು?' ಎಂದು ಕೇಳಿದನು.

'ನಾನು ನಿಮ್ಮೆಯಿಂದ ಬಂದವಳು, ಹಮ್ಮ್ರು ಪಂಗಡಕ್ಕೆ ಸೇರಿದವಳು, ನನ್ನ ಹೆಸರು ಹಂಬ್ರುಮಾಯ್' ಎಂದಳವಳು.

ಕೋವ್ರೊನ್ಸಾ ಅವಳನ್ನು ಮದುವೆಯಾದನು. ಅವಳೂ ಆ ಸ್ಥಳದ ಹೆಂಗಸರಿಗೆಲ್ಲ ನೆಯ್ಗೆಯನ್ನು ಕಲಿಸಿದಳು. 'ನೀನು ನೆಯ್ಗೆಯನ್ನು ಕಲಿತದ್ದು ಹೇಗೆ?' ಎಂದು ಕೇಳಿದರೆ, 'ನಾನು ಮಿೂನಾಗಿದ್ದಾಗ ಹೊಳೆಯಲ್ಲಿ ಹಾವನ್ನು ಕಂಡೆ. ಅದರ ಮೈಮೇಲಿನ ಮಚ್ಚೆಗಳನ್ನು ನಕಲು ಮಾಡಿದೆ. ಮೋಡಗಳಲ್ಲಿ ಪ್ರತಿಬಿಂಬಿತವಾದ ಅದರ ಬಣ್ಣಗಳನ್ನು ಅನುಸರಿಸಿದೆ' ಎಂದು ಅವಳು ಹೇಳಿದಳು. ಕೊವ್ರೊನ್ಸಾ ಕೆಲವು ಬಟ್ಟೆಗಳನ್ನು ಬಿಸಿಲಲ್ಲಿ ಹರಡಿದನು. ಗಾಳಿ ಅದನ್ನು ಬೇರೆ ಹಳ್ಳಿಗಳಿಗೆ ಹಾರಿಸಿಕೊಂಡು ಹೋಯಿತು. ಆ ಪ್ರದೇಶಗಳ ಜನರೂ ನೆಯ್ಗೆಯನ್ನು ಕಲಿತರು. ಕಾಲಕ್ರಮೇಣ ಈ ಕಲೆ ಪ್ರಪಂಚದಲ್ಲೆಲ್ಲ ಹರಡಿತು.

## ಬೆಂಕಿಯನ್ನು ಕಂಡುಹಿಡಿದದ್ದು

ಜನರಿಗೆ ಬೆಂಕಿಯ ಉಪಯೋಗ ತಿಳಿಯುವುದಕ್ಕೆ ಬಹುಕಾಲದ ಮುನ್ನವೇ ಬೆಕ್ಕಿಗೆ ಕರಡಿಯನ್ನು ಕೊಟ್ಟು ಮದುವೆಯಾಯಿತು. ಆ ಮದುವೆಗೆ ಪ್ರಪಂಚದ ಎಲ್ಲಾ ಪ್ರಾಣಿಗಳೂ ಬಂದಿದ್ದವು. ಸೊಗಸಾದ ಔತಣವಿತ್ತು; ಆದರೆ ಯಾವುದನ್ನೂ ಬೇಯಿಸಿರಲಿಲ್ಲ. 'ನಾವು ಈ ಹಸಿಯ ಮಾಂಸವನ್ನು ಮುಟ್ಟುವುದಿಲ್ಲ. ನಮಗೆ ರುಚಿಯಾಗಿರುವ ಏನಾದರೂ ಬೇಕು. ಏಕೆ, ಒಂದಿಷ್ಟು ಬೆಂಕಿಯನ್ನು ತರಬಹುದಲ್ಲ' ಎಂದು ಅತಿಥಿಗಳು ಗೊಣಗಿದವು.

ಚಿರತೆ ಕಿರುಬನಿಗೆ ಹೇಳಿತು 'ನೀನು ಹೋಗಿ ಅದನ್ನು ತೆಗೆದುಕೊಂಡು ಬಾ' ಕಿರುಬ ಥಟ್ಟನೆ ಉತ್ತರಿಸಿತು 'ಇಲ್ಲ, ನೀನೇ ಏಕೆ ಹೋಗಿ ತರಬಾರದು.' ಚಿರತೆ ಹೇಳಿತು 'ಇಲ್ಲ, ಇದು ಯಾರಾದರೂ ಬಲಾಢ್ಯರು ಮಾಡಬೇಕಾದ ಕೆಲಸ.'

ಕಡೆಗೆ ಹುಲಿ 'ಒಳ್ಳೆಯದು, ನಾನು ತರುತ್ತೇನೆ' ಎಂದೊಪ್ಪಿಕೊಂಡಿತು; ಬೆಂಕಿಯನ್ನು ತರಲು ಎದ್ದು ಹೋಯಿತು.

ಮಿಣುಕು ಹುಳು ಪ್ರಪಂಚದಲ್ಲಿದ್ದ ಬೆಂಕಿಯನ್ನೆಲ್ಲ ತನ್ನ ಬಾಲದಲ್ಲಿ ತುಂಬಿಕೊಂಡು ಅದರ ಮೇಲೆ ಕುಳಿತುಕೊಂಡಿತ್ತು. ಹುಲಿ ಇದನ್ನು ಪತ್ತೆ ಹಚ್ಚಿ ಬೆಂಕಿಗಾಗಿ ಅದರೊಡನೆ ಹೋರಾಡಿತು. ಮಿಣುಕು ಹುಳು ಹುಲಿಯನ್ನು ಎಲೆಯ ರೂಪಕ್ಕೆ ತಿರುಗಿಸಿತು; ಗಾಳಿ ಅದನ್ನು ಹಾರಿಸಿಕೊಂಡು ಹೋಯಿತು. ಎಲೆ ಮಂತ್ರವಾದಿ ಝಿಂಝೂ ಗುರುವಿನ ಹೆಸರನ್ನು ಜಪಿಸಿತು. ಎಲೆಗೆ ಹುಲಿಯ ರೂಪ ಹಿಂದಿರುಗಿತು. ಮಿಣುಕು ಹುಳು ಮತ್ತೆ ಅದನ್ನು ಧೂಳಿನ ರೂಪಕ್ಕೆ ತಿರುಗಿಸಿತು; ಗಾಳಿ ಮತ್ತೆ ಅದನ್ನು ಹಾರಿಸಿಕೊಂಡು ಹೋಯಿತು. ಧೂಳು ಈಗ ಮಂತ್ರವಾದಿ ಭಿಂಝೂ ಗುರುವಿನ ಹೆಸರನ್ನು ಜಪಿಸಿತು. ಧೂಳು ಮತ್ತೆ ಹುಲಿಯಾಯಿತು.

ಹುಲಿಯ ಹೋರಾಟ ಮುಂಬರಿಯಿತು. ಈ ಸಲ ಅದು ಮಿಣುಕು ಹುಳುವನ್ನು ಹಿಡಿದು ತನ್ನ ದವಡೆಯಲ್ಲಿ ಇನ್ನೇನು ಅರೆಯಬೇಕು, ಅಷ್ಟರಲ್ಲಿ ಹುಳು ಕೇಳಿಕೊಂಡಿತು 'ನನ್ನನ್ನು



ಬಿಟ್ಟುಬಿಡು, ನಿನಗೆ ಬೆಂಕಿಯನ್ನು ಕೊಡುತ್ತೇನೆ!' ಹುಲಿ ಅದನ್ನು ಬಿಟ್ಟು ಬಿಟ್ಟಿತು. ಆಗ ಮಿಣುಕು ಹುಳು ಇದರ ಬಾಲವನ್ನು ಕೊಯ್ದಿತು. ಕೆಳಗಿದ್ದ ಎಲೆಯ ಮೇಲೆ ಒಂದು ತೊಟ್ಟು ರಕ್ತ ಸುರಿಯಿತು. ಆ ಎಲೆಯೊಂದಿಗೆ ಹುಲಿ ಮನೆಗೆ ಹಿಂದಿರುಗಿತು. ಅಲ್ಲಿ ಒಣಹುಲ್ಲನ್ನು ಒಟ್ಟಿ ಅದರ ಮೇಲೆ ಆ ರಕ್ತದ ಹನಿಯನ್ನು ಬೀಳಿಸಿತು. ಹುಲ್ಲು ಭುಗ್ಗೆಂದು ಹೊತ್ತಿ ಉರಿಯಿತು. ಮದುವೆಯ ಔತಣ ಮತ್ತೆ ಮೊದಲಿಂದ ಕ್ರಮವಾಗಿ ಸಾಗಿತು. ಬೇಯಿಸಿದ ಮಾಂಸವಿದ್ದುದರಿಂದ ಅತಿಥಿಗಳು ಯಾವ ಆಕ್ಷೇಪಣೆಯೆತ್ತಲೂ ಎಡೆಯಿರಲಿಲ್ಲ.

ಒಂದು ದಿನ ಬೆಕ್ಕು ಅತ್ತಿತ್ತ ಅಲೆದಾಡುತ್ತ ಒಂದು ಹಳ್ಳಿಗೆ ಬಂತು. ಅಲ್ಲಿ ಒಂದು ಮನೆ ಅದರ ಕಣ್ಣಿಗೆ ಬಿತ್ತು; ಅದೇನಿರಬಹುದೆಂದು ಆಶ್ಚರ್ಯ ಪಟ್ಟಿತು. ಒಳಗೆ ಹೋಗಿ ನೋಡಿತು; ಪಾತ್ರೆಯ ತುಂಬ ಹಾಲು, ಬಾಯಿ ಹಾಕಿತು; ಸ್ವಲ್ಪ ಕುಡಿಯಿತು; ಹಾಲು ರುಚಿಯಾಗಿರಲಿಲ್ಲ. ಇದನ್ನು ಕುದಿಸಿದರೆ ಚೆನ್ನು ಎಂದುಕೊಂಡಿತು. ಎಲ್ಲಿಗೋ ಹೋಗಿ ಒಂದು ಕಡ್ಡಿಯ ತುದಿಯಲ್ಲಿ ಸ್ವಲ್ಪ ಬೆಂಕಿಯನ್ನು ತಂದು ಅದನ್ನು ಕತ್ತಿನ ಸುತ್ತ ಕಟ್ಟಿಕೊಂಡು ಉರಿಮಾಡಿ ಹಾಲನ್ನು ಚೆನ್ನಾಗಿ ಕಾಯಿಸಿತು. ಅಷ್ಟರಲ್ಲೇ ಜನ ಮನೆಯೊಳಗೆ ಬಂದರು. ಬೆಕ್ಕು ದೌಡು ಹಾಕಿತು. ಅದು ಕಾಯಿಸಿದ್ದ ಹಾಲನ್ನು ಇವರು ಕುಡಿದರು; ತುಂಬಾ ರುಚಿಯಾಗಿತ್ತು. ಅಂದಿನಿಂದಲೂ ಆಹಾರವನ್ನು ಬೇಯಿಸಿ ತಿನ್ನುವುದು ರೂಢಿಯಾಗಿದೆ.

ಬೆಂಕಿಯನ್ನು ಕಂಡುಹಿಡಿದುದರ ವಿಷಯದಲ್ಲಿ ಇನ್ನೂ ಅನೇಕ ಕಥೆಗಳಿವೆ. ಮಧ್ಯ ಭಾರತದ ಕವರ್ಧದಿಂದ ಬಂದ ಕಥೆ ಹೀಗಿದೆ.

ಆದಿಕಾಲದಲ್ಲಿದ್ದ ಮಾನವರಿಗೆ ಅಡಿಗೆ, ಸ್ನಾನ, ಉಡುಪು ಒಂದೂ ಗೊತ್ತಿರಲಿಲ್ಲ. ಬಲು ಉದ್ದವಾದ ಉಗುರುಗಳಿದ್ದವು. ಅವುಗಳನ್ನು ಕತ್ತರಿಸುವ ಯೋಚನೆಯೇ ಅವರಿಗಿರಲಿಲ್ಲ. ಐದು ಹತ್ತು ಜನ ಗುಂಪು ಕಟ್ಟಿಕೊಂಡು ಮರಗಳ ಕೆಳಗೋ ಗುಹೆಗಳಲ್ಲೋ ವಾಸಿಸುತ್ತಿದ್ದರು. ಒಂದು ವರುಷ ಬಿದಿರಿನ ರೋಗ ಹರಡಿತು. ಬಿದಿರುಮೆಳೆಗಳು ಹೂಬಿಟ್ಟ ತತ್‌ಕ್ಷಣವೇ ಒಣಗಿದವು. ಮಳೆಗಾಲ ಹುಟ್ಟುವ ಮುನ್ನ ಅಸಾಧ್ಯ ಸೆಕೆ ಎದ್ದಿತು. ಗಾಳಿ ಬೀಸಿದಾಗ ಒಣಬಿದಿರು ತೂಗಾಡುತ್ತಾ ಒಂದನ್ನೊಂದು ತಿಕ್ಕಿದವು. ಬೆಂಕಿ ಹುಟ್ಟಿತು. ಒಣ ಮರಗಳಿಂದ ತುಂಬಿದ್ದ ಕಾಡಿಗೆ ಕಾಡೇ ಉರಿಯತೊಡಗಿತು. ಬೆಂಕಿ ಆರಿದ ಮೇಲೆ ಆ ಉದ್ದನೆಯ ಉಗುರಿನ ಮಾನವರು ಕಾಡಿಗೆ ಬಂದು ನೋಡಿದರು. ಬೂದಿರಾಶಿಗಳಲ್ಲಿ ಅನೇಕ ಪ್ರಾಣಿಗಳು ಬೆಂದು ಹೋಗಿದ್ದವು. ಅವರಲ್ಲಿ ಒಬ್ಬ ಇದೇನೆಂದು ಕೇಳುತ್ತಾ ಬೆಂದು ಬಿದ್ದಿದ್ದ ಪ್ರಾಣಿಯೊಂದನ್ನು ಮುಟ್ಟಿದನು. ಸುಡುಮಾಂಸದೊಳಗೆ ಅವನ ಬೆರಳುಗಳು ಇಳಿದು ಚುರುಕ್ ಎಂದಿತು. ತತ್‌ಕ್ಷಣವೇ ಕೈಯನ್ನು ಹಿಂದಕ್ಕೆ ತೆಗೆದು, ಬೆರಳುಗಳನ್ನು ಬಾಯಲ್ಲಿಟ್ಟುಕೊಂಡನು. 'ಇದೆಷ್ಟು ಸುವಾಸನೆಯಿಂದ ಕೂಡಿದೆ, ಇದೆಷ್ಟು ರುಚಿಯಾಗಿದೆ, ಹೀಗೆ ಮಾಡಿಯೇ ತಿನ್ನಬೇಕು' ಎಂದುಕೊಂಡನು. ಈ ಅದ್ಭುತ ಸಂತೋಷದಲ್ಲಿ ತನಗಾದ ನೋವನ್ನು ಮರೆತನು. ಅವನು ತನ್ನ ಸ್ನೇಹಿತರೆಲ್ಲರನ್ನೂ ಕರೆಸಿಕೊಂಡು ಭಾರೀ ಔತಣವನ್ನು ಕೊಟ್ಟನು. ಬೇಯಿಸಿದ ಮಾಂಸವನ್ನು ಎಲ್ಲರೂ ಪಾಲುಗೊಂಡರು.

ಮರುದಿವಸ ಅವರು ಕಾಡಿಗೆ ಹೋಗಿ ಒಂದು ಮೊಲವನ್ನು ಕೊಂದರು. ಹಸಿಯ ಮಾಂಸ ಅವರಿಗೆ ಹಿಡಿಸಲಿಲ್ಲ. ಅದನ್ನು ಬೇಯಿಸತೊಡಗಿದರು. ಮೂರು ಗುಪ್ಪುಗಳ ನಡುವೆ ಬೆಂಕಿಯನ್ನು ಹೊತ್ತಿಸಿ, ಮರದ ತೊಗಟೆಯಿಂದ ಮಾಡಿದ ಹಗ್ಗದಿಂದ ಅದನ್ನು ಬಿಗಿದು ಒಲೆಯ ಬೆಂಕಿಯ ಮೇಲೆ ಅದನ್ನು ತೂಗಿಹಾಕಿದರು. ಬೆಂಕಿ ಜ್ವಲಿಸುತ್ತಲೇ ಹಗ್ಗ ಸುಟ್ಟುಹೋಯಿತು. ಮೊಲ ಕೆಂಡಗಳ ಮೇಲೆ ಬಿತ್ತು. ಅದರ ಕೂದಲು ಮಾತ್ರ ಸುಟ್ಟಿತ್ತು. ಮಾಂಸ ಸರಿಯಾಗಿ ಬೆಂದಿರಲಿಲ್ಲ. ಅವರಿಗೆ ತುಂಬಾ ಹಸಿವಾಗಿದ್ದುದರಿಂದ ಅದನ್ನೇ ತಿಂದರು.

ಇನ್ನೊಂದು ದಿನ ಈ ಉದ್ದನೆಯುಗುರಿನ ಮಾನವರು ಒಂದು ಜಿಂಕೆಯನ್ನು ಕೊಂದರು. ಮೊದಲು ಅದರ ಚರ್ಮವನ್ನು ಸುಲಿದು, ಅನಂತರ ಮಾಂಸವನ್ನು ಬಿಡಿಸಿಕೊಂಡರು; ಸಣ್ಣ ಸಣ್ಣ ಹೋಳುಗಳನ್ನು ಕತ್ತರಿಸಿದರು. ಹೋಳುಗಳನ್ನು ಚರ್ಮದೊಳಗಿಟ್ಟು ಸುಟ್ಟು ಬೆಂಕಿಯ ಮೇಲಿಟ್ಟು ಬೇಯಿಸಿದರು. ಈ ಸಲ ಮಾಂಸ ಚೆನ್ನಾಗಿ ಬೆಂದಿತ್ತು. ಎಲ್ಲರಿಗೂ ಸಂತೋಷ ವಾಯಿತು. ಮುಂದೆ ಹೀಗೆಯೇ ಮಾಂಸವನ್ನು ಎಲೆಗಳಿಂದ ಸುತ್ತಿ ಬೇಯಿಸುವುದನ್ನು ಕಲಿತರು. ಅವರ ಪ್ರಯತ್ನ ಸಫಲವಾಯಿತು.

ಇಷ್ಟಾದರೂ ಈ ದೀರ್ಘನಖರ ಬಳಿ ಅಡಿಗೆಯ ಪಾತ್ರೆಗಳಿರಲಿಲ್ಲ. ಪದಾರ್ಥಗಳನ್ನು ನೀರಿಗೆ ಹಾಕಿ ಕುದಿಸುವುದು ಸಾಧ್ಯವಿರಲಿಲ್ಲ. ಒಂದಾನೊಂದು ದಿನ ಅವರು ಮಳೆಯಲ್ಲಿ ನಡೆದು ಬರುತ್ತಿದ್ದಾಗ ಕಾಲಿಗೆ ಕೆಸರು ಅಂಟಿತು; ಕಾಲ್ಬೆರಳುಗಳ ನಡುವೆ ತುಂಬಿಕೊಂಡಿತು ಮನೆಗೆ ಬಂದು ಮೈ ಬೆಚ್ಚಗೆ ಮಾಡಿಕೊಳ್ಳುವುದಕ್ಕಾಗಿ ಬೆಂಕಿಯನ್ನು ಹೊತ್ತಿಸಿ ಅದರ ಮುಂದೆ ಕುಳಿತರು. ಆಗ ಅವರ ಹೆಜ್ಜೆಗೆ ಅಂಟಿಕೊಂಡಿದ್ದ ಕೆಸರು ಒಣಗಿ ಗಟ್ಟಿಯಾಯಿತು ಅವರಲ್ಲಿ

ಒಬ್ಬ 'ಮಣ್ಣು ಈ ರೀತಿಯಲ್ಲಿ ಗಟ್ಟಿಯಾಗುವುದಾದರೆ ಅದರಿಂದ ಏನಾದರೂ ಮಾಡಬಹುದಲ್ಲವೆ' ಎಂದುಕೊಂಡನು. ಅವನು ಮಣ್ಣಿನಿಂದ ಮಡಕೆಯನ್ನು ಮಾಡಿ, ಬಿಸಿಲಲ್ಲಿ ಒಣಗಿಸಿ, ಅದರಲ್ಲಿ ನೀರನ್ನೂ ಮಾಂಸವನ್ನೂ ತುಂಬಿ, ಮೂರು ಕಲ್ಲುಗಳಿಂದ ಮಾಡಿದ ಒಲೆಯ ಉರಿಯ ಮೇಲೆ ಇಟ್ಟನು. ಆದರೆ ಬೆಂಕಿಯೇರಿದಾಗ ಮಡಕೆಯೊಡೆಯಿತು; ನೀರು ಬಿದ್ದು ಬೆಂಕಿ ಆರಿತು. ಮಡಕೆಯನ್ನು ಗಟ್ಟಿಮಾಡಬೇಕಾದರೆ ಸೂರ್ಯನ ಶಾಖವೇ ಸಾಲದೆನ್ನುವುದು ಅವನಿಗೆ ಆಗ ಹೊಳೆಯಿತು. 'ನಾವು ಉರಿಯುವ ಒಲೆಯ ಮೇಲೆ ಅಡಿಗೆಮಾಡಬೇಕಾದರೆ, ಬೆಂಕಿಯಿಂದ ಸುಟ್ಟ ಮಡಕೆಯನ್ನೇ ಬಳಸಬೇಕು' ಎಂದುಕೊಂಡನು. ಹಸಿಯಾಗಿದ್ದ ಮಡಕೆಯನ್ನು ಬೆಂಕಿಯ ಮೇಲೆ ಕಾಯಿಸಿದನು. ಈ ಸಲ ಅಡಿಗೆಗೆ ಅದನ್ನು ಇಟ್ಟಾಗ ಒಡೆಯಲಿಲ್ಲ. ಅಂದಿನೀಚೆಗೆ ಮಾನವರು ಮಡಕೆಗಳನ್ನು ಮಾಡುತ್ತಿದ್ದಾರೆ; ಅಡಿಗೆ ಮಾಡಲು ಬೆಂಕಿಯನ್ನು ಬಳಸುತ್ತಿದ್ದಾರೆ.

## ತಂಬಾಕು

ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ರಾಜನಿದ್ದನು. ಅವನಿಗೆ ಒಬ್ಬಳೆ ಮಗಳಿದ್ದಳು. ಆ ಹುಡುಗಿ ಕುಳ್ಳಿಯಾಗಿದ್ದುದು ಅವನ ದೌರ್ಭಾಗ್ಯ. ಜೊತೆಗೆ, ಮಾಲುಗಣ್ಣು, ಮೈಯೆಲ್ಲಾ ಹುಣ್ಣು; ಒಂದು ತೋಳು ವಿಕಾರವಾಗಿತ್ತು. ಅವಳಿಗೂ ವಯಸ್ಸು ಬಂತು. ತಂದೆ ಕೈಯಲ್ಲಿ ಬೇಕಾದಷ್ಟು ಹಣವನ್ನು ಇಟ್ಟುಕೊಂಡು ಮಗಳಿಗೆ ಗಂಡು ಹುಡುಕಲು ಹೊರಟನು. ಯುವಕರನೇಕರು ಅವಳನ್ನು ನೋಡ ಬಂದರು. ಈ ಕುರೂಪಿಯನ್ನು ಕಂಡ ಕೂಡಲೆ ಅವರ ನಾಲಗೆ ಕಟ್ಟಿಹೋಗಿ ಮಾತಿಗೆ ಅವಕಾಶವಿಲ್ಲದೆ, ಎಲ್ಲರೂ ಹೇಳದೆ ಕೇಳದೆ ಓಡಿಬಿಟ್ಟರು.

ಪ್ರಪಂಚದಲ್ಲಿ ಇರುವೆಗಳು, ಇಲಿಗಳು, ಹಕ್ಕಿಗಳು, ದನಗಳು, ಮನುಷ್ಯರು ಮುಂತಾಗಿ ಎಲ್ಲರೂ ಜೋಡಿ ಹಾಕಿಕೊಂಡು ಆನಂದದಿಂದ ಬದುಕುತ್ತಿರುವುದನ್ನು ಈ ಪ್ರಾಯದ ಹೆಣ್ಣು ನೋಡಿದಳು. ರಾಜನೇನೋ ಅವಳಿಗೆ ಗಂಡು ಹುಡುಕುವ ಪ್ರಯತ್ನದಲ್ಲೇ ಇದ್ದನು; ಆದರೆ ಯಾರೂ ಅವಳನ್ನು ಕೈಹಿಡಿಯಲು ಮುಂದೆ ಬರಲಿಲ್ಲ. ಇದರಿಂದ ಅವಳಿಗೆ ಬಹಳ ಸಂಕಟವಾಯಿತು. ಒಂದು ದಿನ ಅವಳು ತಂದೆಯ ಬಳಿಗೆ ಹೋಗಿ 'ಯಾರೂ ನನ್ನನ್ನು ಮದುವೆಯಾಗುವುದಿಲ್ಲ. ಹೀಗೆ ಬದುಕಿರುವುದೂ ನನಗೆ ಇಷ್ಟವಿಲ್ಲ' ಎಂದಳು. ಹೀಗೆ ಹೇಳುತ್ತಲೇ ಕೆಳಗೆ ಬಿದ್ದು ಸತ್ತುಹೋದಳು.

ರಾಜ ಅವಳ ಹೆಣವನ್ನು ಸಿಂಗರಿಸಿ ಹೂಳಲು ಸಿದ್ಧಪಡಿಸುತ್ತಿದ್ದನು. ನೆರೆಹೊರೆಯವರು ಅದನ್ನು ಸುಡಬೇಕೆಂದರು. ಅವರ ಮಾತಿನಂತೆ, ಎತ್ತರವಾದ ಚಿತೆಯೊಂದನ್ನು ನಿರ್ಮಿಸಿ ಅದರ ಮೇಲೆ ತನ್ನ ದುರ್ದೈವಿ ಮಗಳ ವಿಕೃತ ದೇಹವನ್ನಿರಿಸಿ ದಹನಮಾಡಿದನು. ಕ್ಷಿಪ್ರದಲ್ಲಿಯೆ ಅದು ಸುಟ್ಟು ಬೂದಿಯಾಯಿತು; ಬೆನ್ನು ಮೂಳೆಯ ಒಂದು ಮುರುಕು ಮಾತ್ರ ಉಳಿಯಿತು.

ಮೃತಳ ಆತ್ಮ ಮಹಾದೇವನ ಸನ್ನಿಧಿಗೆ ಹೋಯಿತು. ಅವಳನ್ನು ತುಂಬಾ ಆದರದಿಂದ ಕಂಡು, ಅವನು 'ನಿನಗೆ ಬೇಕಾದ ವರವನ್ನು ಕೇಳಿಕೋ' ಎಂದನು.

ಹುಡುಗಿ ಬೇಡಿಕೊಂಡಳು 'ನನ್ನ ಜೀವನವೇ ದುಃಖಮಯವಾಗಿತ್ತು. ಯಾರೂ ನನ್ನನ್ನು ಮೋಹಿಸಲಿಲ್ಲ. ಪ್ರಪಂಚದ ಎಲ್ಲರ ಪ್ರೀತಿಯನ್ನೂ ಗಳಿಸುವ ಯಾವುದಾದರೂ ಒಂದು

ವಸ್ತುವಿನ ರೂಪಕ್ಕೆ ನನ್ನನ್ನು ತಿರುಗಿಸು.' ತಥಾಸ್ತು ಎಂದ ಮಹಾಪುರುಷ ಅವಳ ಆತ್ಮವನ್ನು ಚಿತಾ ಭಸ್ಮವಿದ್ದ ಅವಳ ಬಳಿಗೆ ಕಳಿಸಿ ಕೊಟ್ಟನು; ಅದು ಅಲ್ಲಿ ಬಿದ್ದಿದ್ದ ಮೂಳೆಯ ಮುರುಕನ್ನು ಹೊಕ್ಕಿತು. ಉದ್ದಿಷ್ಟ ಕಾಲದಲ್ಲಿ ಅದು ಮೊಳೆತು ಬೆಳೆದು ತಂಬಾಕಿನ ಗಿಡವಾಯಿತು.

ಅದೇ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಕುರುಬ ಆ ಗಿಡವನ್ನು ಕಂಡನು. 'ಇದೆಷ್ಟು ಹೊಚ್ಚಹೊಸತಾಗಿಯೂ ಹಿತಕರವಾಗಿಯೂ ಕಾಣುತ್ತಿದೆ' ಎಂದುಕೊಂಡು, ಅದರ ಎಲೆಯೊಂದನ್ನು ಕಿತ್ತು ಮೂಸಿದನು. ಅದರ ಪರಿಮಳ ತುಂಬಾ ಆಪ್ಯಾಯಮಾನವಾಗಿತ್ತು ಅವನು ಆ ಗಿಡದ ಬೀಜಗಳನ್ನು ತಂದು ಬಿತ್ತಿದನು. ಅವು ಯಥೇಚ್ಛವಾಗಿ ಬೆಳೆದವು. ಆ ಎಲೆಗಳನ್ನು ಕಿತ್ತು ಮೂಸುವುದು ಅವನ ಪದ್ಧತಿಯಾಗಿತ್ತು. ಆದರೆ ಒಂದು ದಿನ ಎಲೆಯ



ಚೂರೊಂದನ್ನು ಬಾಯಿಗೆ ಹಾಕಿಕೊಂಡನು; ಚೆನ್ನಾಗಿ ಅಗಿದನು. ಅದು ಬಲು ರುಚಿಯಾಗಿತ್ತು. ದಿನವೂ ಹೀಗೆ ಅದನ್ನು ಅಗಿಯಲು ಪ್ರಾರಂಭಿಸಿದನು. ಕಾಲಕ್ರಮದಲ್ಲಿ ಆ ಸೊಪ್ಪನ್ನು ಒಂದು ಕೊಳವೆಯಲ್ಲಿ ತುಂಬಿಯೋ, ಸುರುಳಿಸುತ್ತಿಯೋ ಸುಟ್ಟು ಸೇದುವುದು ಸೂಕ್ತವೆಂಬುದನ್ನು ಕಂಡುಹಿಡಿದನು. ಈ ನೂತನ ಭಾಗ್ಯವನ್ನು ಅವನು ತನ್ನ ಸ್ನೇಹಿತರಿಗೂ ಹಂಚಿಕೊಟ್ಟದ್ದು ಸಹಜವಾಗಿಯೇ ಇದೆ. ಅವರೂ ಈ ಪರಿಮಳಿತ ಧೂಮವನ್ನು

ಸೇದುವುದನ್ನು ಅಭ್ಯಾಸಮಾಡಿಕೊಂಡರು; ಅವನಿಂದ ಅದರ ಬೀಜಗಳನ್ನು ತೆಗೆದುಕೊಂಡು ಗಿಡಗಳನ್ನು ಬೆಳೆಸಿದರು. ಅದರ ಪ್ರಭಾವ ಲೋಕದಲ್ಲೆಲ್ಲ ಹರಡಿತು. ಈಗ ಜನ ಹೇಳುತ್ತಾರೆ 'ಹೆಂಡತಿಗೂ ತಂಬಾಕಿಗೂ ಎಳ್ಳಷ್ಟೂ ವ್ಯತ್ಯಾಸವಿಲ್ಲ. ನಾವು ಇಬ್ಬರನ್ನೂ ಸಮಾನವಾಗಿ ಪ್ರೀತಿಸುತ್ತೇವೆ.'

ಕುರೂಪಿ ಹುಡುಗಿ ಇಂದು ಸುಖಿಯಾಗಿದ್ದಾಳೆ. ಏಕೆಂದರೆ ವಿವೇಕಿಗಳೆಲ್ಲರೂ ಅವಳನ್ನು ಪ್ರೀತಿಸುತ್ತಾರೆ, ಮತ್ತು ಎಲ್ಲಕ್ಕೂ ಮೊದಲು ತನ್ನ ಕೊಳವೆಯಲ್ಲಿ ಅವಳನ್ನು ತುಂಬಿಕೊಂಡು ಮುತ್ತಿಡದೆ ಯಾರೂ ಕೆಲಸದ ಮೇಲೆ ಹೋಗುವುದಿಲ್ಲ.

## ಮೊದಲ ನರ್ತಕಿಯರು

ಮಾನವರು ಮೊತ್ತಮೊದಲು ಕುಣಿಯಲು ಮೊದಲುಮಾಡಿದ್ದು ನವಿಲಗುಡ್ಡದ ಮೇಲೆ. ಏಕೆಂದರೆ ನವಿಲುಗಳು ಈ ಸ್ಥಳದಲ್ಲಿ ತಮ್ಮ ನಲ್ಲೆಯರ ಮುಂದೆ ಸಮಸ್ತ ಸೌಂದರ್ಯವನ್ನೂ ಪ್ರದರ್ಶಿಸುತ್ತ ಕುಣಿಯುತ್ತಿದ್ದವು. ಒಂದು ದಿನ ಕಾಡಿನಿಂದ ಹಿಂದಿರುಗುತ್ತಿದ್ದ ಗೊಂಡರ ಒಂದು ಗುಂಪು ಈ ಕುಣಿತವನ್ನು ನೋಡಿತು. ಅವರಿಗೆ ತುಂಬಾ ಸಂತೋಷವಾಯಿತು. ತಾವೂ ಆ ಪಕ್ಷಿಗಳ ಜೊತೆಗೆ ಸೇರಿಕೊಂಡು ಎಲ್ಲರೂ ಒಟ್ಟಿಗೆ ಕುಣಿದರು. ಅವುಗಳ ಪದ–ವಿನ್ಯಾಸಕ್ರಮ ವನ್ನು ಕಲಿತ ಗೊಂಡರು ತಮ್ಮ ಮನೆಗೆ ಹಿಂದಿರುಗಿ ತಮ್ಮ ಸ್ನೇಹಿತರಿಗೂ ಕುಣಿತವನ್ನು ಕಲಿಸಿದರು.

ಗುಡ್ಡದ ಮೇಲೊಂದು ಎತ್ತರವಾದ ಖರ್ಜೂರ ವೃಕ್ಷವಿತ್ತು; ಅದರ ಸುತ್ತ ಕುಣಿಯುವುದು ನವಿಲುಗಳ ಪದ್ಧತಿಯಾಗಿತ್ತು. ನವಿಲಿಗೆ ತಲೆಯ ಮೇಲೆ ಕುಚ್ಚೂ, ನವಿರಾದ ಬಾಲವೂ ಇರುವುದರಿಂದ ಗೊಂಡರೂ ತಮ್ಮ ಪೇಟಗಳಿಗೆ ಕುಚ್ಚುಗಳನ್ನು ಸಿಕ್ಕಿಸಿಕೊಂಡು ಮೈತುಂಬ ಅಲಂಕಾರ ಮಾಡಿಕೊಳ್ಳುತ್ತಿದ್ದರು; ನವಿಲು ತನ್ನ ಸೌಂದರ್ಯವನ್ನು ತಾನೇ ತಿರುಗಿತಿರುಗಿ ನೋಡಿಕೊಳ್ಳುತ್ತ ಕುಣಿಯುವುದರಿಂದ, ಗೊಂಡರೂ ತಮ್ಮ ನೆರಳನ್ನೇ ತಿರುಗಿತಿರುಗಿ ನೋಡಿಕೊಳ್ಳುತ್ತ ಕುಣಿದರು. ಅವರು ಹಾಡಿದ ಮೊದಲ ಹಾಡು:

ಖರ್ಜೂರದ ಮರದ ಕೆಳಗೆ ನವಿಲು ಕುಣಿಯುತಿದೆ;
ಉದ್ದವಾದ ಪುಚ್ಛವುಳ್ಳ ನನ್ನ ನವಿಲು ಹುಟ್ಟಿದೆ.

ಗೊಂಡರು ಕುಣಿತದ ರಹಸ್ಯವಷ್ಟನ್ನೂ ಕಲಿತ ಮೇಲೆ, ನವಿಲುಗಳು ಅವರೊಂದಿಗೆ ಕುಣಿಯುವುದನ್ನು ನಿಲ್ಲಿಸಿದವು. 'ನಮ್ಮ ಪುಚ್ಛಗಳಿಂದ ಕುಚ್ಚುಗಳನ್ನು ಮಾಡಿಕೊಂಡು ನಿಮ್ಮ ಪೇಟಗಳಿಗೆ ಸಿಕ್ಕಿಸಿಕೊಂಡು ಕುಣಿಯಿರಿ; ನಿಮ್ಮ ಕುಣಿತ ಎಂದಿಗೂ ತಪ್ಪು ದಾರಿ ಹಿಡಿಯುವುದಿಲ್ಲ' ಎಂದು ಅವು ಗೊಂಡರಿಗೆ ಹೇಳಿದವು; ತಮ್ಮ ಪುಚ್ಛಗಳಿಂದ ಬೇಕಾದಷ್ಟು ಗರಿಗಳನ್ನು ಹಿರಿದು ಗೊಂಡರಿಗೆ ಕೊಟ್ಟವು. ಗೊಂಡರು ಅಂದಿನಿಂದಲೂ ಅವುಗಳನ್ನು ಬಳಸುತ್ತಿದ್ದಾರೆ.

# ಮಾತಾಡುವ ಪ್ರಾಣಿಗಳು

## ಮೊದಲ ಕಪಿಗಳು

ಕಪಿಗಳು ಮಾನವ ವಂಶದಿಂದ ಹುಟ್ಟಿದವೆಂದೂ, ಮಾನವರು ಕಪಿಗಳ ವಂಶಜರಲ್ಲವೆಂದೂ ಭಾರತದ ಗುಡ್ಡಗಾಡುಗಳ ಜನರಲ್ಲಿ ಒಂದು ನಂಬಿಕೆ ಇದೆ; ಮತ್ತು ಇದು ಹೇಗೆಂಬುದನ್ನು ವರ್ಣಿಸುವ ಅನೇಕ ಕಥೆಗಳಿವೆ. ಎಲೆಯುಡುಪನ್ನು ಧರಿಸುತ್ತಿದ್ದ, ಒರಿಸ್ಸದ ಜುವಾಂಗರು ಹೇಳಿದ ಕಥೆ ಇಲ್ಲಿದೆ.

ಹಿಂದೆ ಕಪಿಗಳು ಮನುಷ್ಯರಾಗಿದ್ದರು. ಆಗೊಂದು ದಿನ ಅವರು ತಮ್ಮ ಹಳೆಯ ಪದ್ಧತಿಯಂತೆ ಕಾಡಿಗೆ ಹೋಗಿ ಪೊದರು ಮೆಳೆಗಳನ್ನು ಕತ್ತರಿಸಿ, ಬೇಸಾಯಕ್ಕಾಗಿ ಭೂಮಿಯನ್ನು ತೆರವು ಮಾಡುತ್ತಿದ್ದರು. ಒಣಗಿದ ಗಿಡಗೆಂಟೆಗಳಿಗೆ ಬೆಂಕಿಯನ್ನು ತೋರಿಸಿದರು. ಅವು ಹೊತ್ತಿಕೊಳ್ಳಲೇ ಇಲ್ಲ. ಕೊಂಬೆಗಳನ್ನೂ ತರಗೆಲೆಗಳನ್ನೂ, ಒಟ್ಟಿದರು. ಗ್ರಾಮದ ಮುಖಂಡನ ಮನೆಯಿಂದಲೂ, ಪೂಜಾರಿಯ ಮನೆಯಿಂದಲೂ, ಮಂತ್ರಗಾರನ ಮನೆಯಿಂದಲೂ, ಗ್ರಾಮದ ಕಾವಲುಗಾರನ ಮನೆಯಿಂದಲೂ ಬೆಂಕಿಯನ್ನು ತಂದು ಹಾಕಿದರು. ಆಗಲೂ ಅವು ಹೊತ್ತಿಕೊಳ್ಳಲಿಲ್ಲ. ಅವರ ಕೈಗಳು ತರದು ಹೋಗಿದ್ದವು; ಮುಖದಿಂದ ಬೆವರಿಳಿಯುತ್ತಿತ್ತು. ಅವರ ಗಡ್ಡಮೀಸೆಗಳು ಹೊತ್ತಿಕೊಂಡರೂ ಅವರು ಒಟ್ಟಿದ ರಾಶಿ ಹೊತ್ತಿಕೊಳ್ಳಲಿಲ್ಲ. 'ಈ ಅವಸ್ಥೆಯಲ್ಲಿ ಮನೆಗೆ ಹೋದರೆ, ನಮಗೆ ಸಿಕ್ಕುವ ಲಾಭ ಒಂದೇ – ಹೆಂಡಿರ ಬೈಗುಳ' ಎಂದು ಮಾತಾಡಿಕೊಂಡರು. ಪ್ರತಿಯೊಬ್ಬನೂ ತನ್ನ ಬೆನ್ನಿಗೆ ಒಂದು ತುಂಡು ಸೌದೆಯನ್ನು ಕಟ್ಟಿಕೊಂಡು 'ಹೂಪ್-ಹೂಪ್ ಹೂಪ್-ಹೂಪ್' ಎಂದು ಕಿರಿಚುತ್ತಾ ಕುಣಿಯುತ್ತಾ, ಮನೆಗಳಿಗೆ ಹಿಂದಿರುಗಿದರು; ಹೀಗೆ ಮಾಡುವುದರಿಂದ ಸಿಟ್ಟುಗೊಂಡ ತಮ್ಮ ಹೆಂಡಿರ ಗಮನವನ್ನು ಬೇರೆ ಕಡೆಗೆ ತಿರುಗಿಸುವುದು ಸಾಧ್ಯವೆಂದು ತಿಳಿದಿದ್ದರು. ಆದರೆ ಬೆನ್ನಿಗೆ ಬಿಗಿದಿದ್ದ ಸೌದೆಗಳು ಬಾಲಗಳಾಗಿ ರೂಪುಗೊಂಡವು; ಬೆವರು ಮೈತುಂಬಾ ಕೂದಲಾಗಿ ರೂಪುಗೊಂಡಿತು. ಅವರು ಕಪಿಗಳಾಗಿ ಕಾಡಿಗೆ ಹೋದರು. ಹಣ್ಣು ಹಂಪಲನ್ನು ತಿಂದು ಬದುಕುತ್ತಿದ್ದರು.

ಗಡಬರು ಹೇಳಿದ ಇನ್ನೊಂದು ಕಥೆಯಿದೆ. ಅದು ಪೂರ್ವಕಾಲದಲ್ಲಿ ಕಪಿಗಳ ವರ್ತನೆ ಹೇಗಿತ್ತೆಂಬುದನ್ನು ತಿಳಿಸುತ್ತದೆ.

ಯಾವುದೋ ಒಂದು ಹಳ್ಳಿ; ಅಲ್ಲಿ ಹನ್ನೊಂದು ಮಂದಿ ಯುವಕರೂ, ಹನ್ನೊಂದು ಮಂದಿ ಯುವತಿಯರೂ ಇದ್ದರು. ಅವರಿಗೆ ಕುಣಿತದ ಚಟವಿತ್ತು. ಒಂದು ಸಂಜೆ ಅವರು ಕುಣಿಯುತ್ತಿದ್ದಾಗ ಅಂಗಿ ಪೇಟಗಳನ್ನು ಧರಿಸಿದ ಒಂದು ಕಪಿ ಅಲ್ಲಿಗೆ ಬಂದು, ಸಮೀಪದಲ್ಲಿದ್ದ

ಕಲ್ಲಿನ ಮೇಲೆ ಕುಳಿತುಕೊಂಡಿತು. ಅದು ತನ್ನ ಕೈಲಿದ್ದ ಪಿಟೀಲನ್ನು ಸುಶ್ರಾವ್ಯವಾಗಿ ನುಡಿಸತೊಡಗಿತು. ಅದು ಎಷ್ಟು ಚೆನ್ನಾಗಿ ನುಡಿಸಿತೆಂದರೆ, ಕಪಿ ಅದು ಎಂಬುದೇ ಎಲ್ಲರಿಗೂ ಮರೆತುಹೋಯಿತು; ಅದರ ಮುಂದೆ ಯುವತಿಯರು ಅದ್ಭುತವಾಗಿ ಕುಣಿದರು.

ಪ್ರತಿ ರಾತ್ರಿಯೂ ಹೀಗೆಯೇ ನಡೆಯುತ್ತಿತ್ತು. ಪರಮಾಶ್ಚರ್ಯಕರವಾಗಿ ಪಿಟೀಲು ನುಡಿಸುತ್ತಿದ್ದ ಕಪಿಯ ವಿಷಯದಲ್ಲಿ ಯುವತಿಯರೆಲ್ಲರಿಗೂ ಪ್ರೀತಿ ಹುಟ್ಟಿತು. ಅದಕ್ಕೆ ಒಬ್ಬಳು



ಉಂಗುರವನ್ನೂ, ಇನ್ನೊಬ್ಬಳು ತಿಂಡಿಯನ್ನೂ, ಮತ್ತೊಬ್ಬಳು ಸಾರಾಯಿಯನ್ನೂ ತಂದುಕೊಟ್ಟರು.

ಯುವಕರಿಗಾದರೋ ಇವರ ವರ್ತನೆ ಸರಿಬೀಳಲಿಲ್ಲ. ಅವರು ತಮ್ಮಲ್ಲೇ ಮಾತಾಡಿಕೊಂಡರು, 'ಈ ಪ್ರಾಣಿಯನ್ನು ಯಾರೂ ಅರಿಯರು. ಇದು ಎಲ್ಲಿಂದ ಬಂತು? ಯಾವುದಿದು?' ಒಂದು ರಾತ್ರಿ ಅವರು ಬಲು ಎಚ್ಚರಿಕೆಯಿಂದ ನಡೆಯುವುದೆಲ್ಲವನ್ನೂ ಕಾದು ನೋಡುತ್ತಿದ್ದರು. ಕಪಿಯ ಬಾಲ ಹಿಂದೆ ತಗುಲಿಕೊಂಡಿತ್ತು; ಅಲ್ಲಿಯ ತನಕ ಅದನ್ನು ಕಪಿ ಹಿಡಿದುಕೊಂಡು ಬಂದಿದ್ದ ಕೋಲೆಂದು ಎಲ್ಲರೂ ತಿಳಿದಿದ್ದರು. ಆ ರಾತ್ರಿ ಅವರಿಗೆ ನಿಜಸ್ಥಿತಿ ಗೊತ್ತಾಯಿತು. 'ಇದೊಂದು ಕಪಿ' ಎಂದು ಪಿಸುಗುಟ್ಟಿದರು. ಆಗ ಅವರು ಸುಮ್ಮನಿದ್ದರು; ಕುಣಿತ ಯಥಾಪ್ರಕಾರ ಸಾಗಿತು; ಅದು ಮುಗಿದ ಮೇಲೆ ಎಲ್ಲರೂ ಮನೆಗೆ ಹೋದರು, ಕಪಿ ತನ್ನ ಮರದ ತುದಿಗೆ ಏರಿಹೋಯಿತು.

ಮಾರನೆಯ ದಿವಸ ಯುವಕರೆಲ್ಲರೂ ಸೇರಿ ಆ ಕಪಿ ಬಂದು ಕೂರುತ್ತಿದ್ದ ಕಲ್ಲಿನ ಸುತ್ತ ಮರದ ತುಂಡುಗಳನ್ನು ಪೇರಿಸಿ ಬೆಂಕಿ ಹಚ್ಚಿದರು. ಅದು ಚೆನ್ನಾಗಿ ಕಾದ ಮೇಲೆ ತಮ್ಮ ಕೆಲಸ ಪತ್ತೆಯಾಗದಂತೆ ಮಾಡಲು ಮೇಲೂ ಸುತ್ತಲೂ ಚೆನ್ನಾಗಿ ಗುಡಿಸಿದರು. ಎಲ್ಲರೂ ಅದರ ಸುತ್ತಣ ನೆಲದ ಮೇಲೆ ಕುಳಿತು ಹಾಡತೊಡಗಿದರು. ಆ ಸಮಯದಲ್ಲಿ, ಕಪಿ ಪಿಟೀಲನ್ನು ಎತ್ತಿಕೊಂಡು ಬಂದು ಆ ಕಲ್ಲಿನ ಮೇಲೆ ಎಂದಿನಂತೆ ಮಂಡಿಸಿತು. ಸುಡುಸುಡು ಕಾದ ಕಲ್ಲು ಕಪಿಯ ಹಿಂಭಾಗದ ಚರ್ಮವನ್ನು ಸುಟ್ಟಿತು. 'ನೋವಿನಿಂದ 'ಕುಯ್ಯೋ ಮರ್ರೋ' ಎಂದು ಚೀರುತ್ತ ಅದು ಓಡಿಹೋಯಿತು.

ಕಪಿಗೆ ಉಂಗುರವನ್ನೂ ತಿಂಡಿಯನ್ನೂ ಸಾರಾಯಿಯನ್ನೂ ನೀಡಿ ಸತ್ಕರಿಸಿದ ಯುವತಿಯರನ್ನು ಕಂಡಾಗಲೆಲ್ಲಾ ಆ ಯುವಕರು ಗೇಲಿ ಮಾಡುತ್ತಲೇ ಇದ್ದರು ಅಂದಿನಿಂದೀಚೆಗೆ ಕಪಿಗಳ ಪೃಷ್ಠ ಕೆಂಪಗಾಯಿತು.

## ಕಪ್ಪೆ ಮತ್ತು ಕಪಿ

ಒಂದಾನೊಂದು ಕಾಲದಲ್ಲಿ ಒಬ್ಬ ರಾಜನಿದ್ದನು. ಒಂದು ಕಪ್ಪೆಯೂ, ಒಂದು ಕಪಿಯೂ ಅವನಲ್ಲಿ ಚಾಕರಿಗೆ ಸೇರಿದ್ದವು ಆಗಿನ ಕಾಲದಲ್ಲಿ ಪ್ರಾಣಿಗಳೂ ಮಾತಾಡುತ್ತಿದ್ದವು. ಕಪಿ ಮೋಸಗಾರ; ಅದರ ದುರಾಶೆಗೆ ಪಾರವೇ ಇರಲಿಲ್ಲ; ರಾಜನನ್ನು ಕೊಂದು ರಾಜ್ಯಭಾರವನ್ನು ತನ್ನ ಕೈಗೆ ತೆಗೆದುಕೊಳ್ಳಬೇಕೆಂದು ಹವಣಿಸಿತು. ಕಪಿ ದುರಹಂಕಾರಿ; ರಾಜ ತನಗೆ ವಹಿಸಿದ ಯಾವ ಕೆಲಸವನ್ನೂ ಅದು ಶ್ರದ್ಧೆಯಿಂದ ಮಾಡುತ್ತಿರಲಿಲ್ಲ.

ರಾಜ ಒಂದು ದಿನ ಮೀನನ್ನು ತರುವ ಕೆಲಸವನ್ನು ಕಪ್ಪೆಗೂ, ಹಣ್ಣುಗಳನ್ನು ತರುವ ಕೆಲಸವನ್ನು ಕಪಿಗೂ ವಹಿಸಿದನು. ಕಾಡಿಗೆ ಹೋದ ಕಪಿ ತಾನು ಕಿತ್ತ ಹಣ್ಣಷ್ಟನ್ನೂ ತಾನೇ ತಿಂದು ಹಾಕಿ, ಹೊಟ್ಟೆ ಭಾರ್ರೆಸಲು ಮಲಗಿ ನಿದ್ದೆಮಾಡಿತು. ಸಂಜೆಯ ಹೊತ್ತಿಗೆ ಅದಕ್ಕೆ ಎಚ್ಚರವಾಯಿತು ಹಾಗೆಯೇ ಅರಮನೆಗೆ ಹೋದರೆ 'ಹಣ್ಣುಗಳನ್ನು ಏಕೆ ತರಲಿಲ್ಲ?' ಎಂದೆಲ್ಲಿ

ರಾಜ ಹೊಡೆಯುವನೋ ಎಂಬ ಭಯವೂ ಹುಟ್ಟಿತು. ಇರಲಿ, ಒಂದು ಉಪಾಯವನ್ನು ಮಾಡುವೆನೆಂದು ತನ್ನ ಮೈಮೇಲೆಲ್ಲ ಮಣ್ಣು ಸುರಿದುಕೊಂಡು ಮನೆಯ ಕಡೆಗೆ ಧಾವಿಸಿತು. ಆ ದಾರಿಯಲ್ಲೇ ಬರುತ್ತಿದ್ದ ಕಪ್ಪೆ ಒಂದು ದೊಡ್ಡ ಮೀನಿನ ರಾಶಿಯನ್ನೇ ತಲೆಯ ಮೇಲೆ ಹೊತ್ತಿತ್ತು.

ಕಪ್ಪೆ ಅಷ್ಟೊಂದು ಮೀನನ್ನು ಹೊತ್ತು ತರುತ್ತಿರುವುದನ್ನೂ, ತಾನು ಬರಿಗೈಲಿ ಹಿಂದಿರುಗುತ್ತಿರುವುದನ್ನೂ ಅರಿತ ಕಪಿ ತನಗಿಂತ ಹೆಚ್ಚಿನ ಪದವಿಗೆ ರಾಜ ಕಪ್ಪೆಯನ್ನು ಏರಿಸಬಹುದೆಂಬ ಶಂಕೆಯಿಂದ ಚಿಂತಾಕ್ರಾಂತವಾಯಿತು. ಅದು ಮೀನಿನ ಬುಟ್ಟಿ ಸಮೇತ ಕಪ್ಪೆಯನ್ನು ಹೊಳೆಗೆ ತಳ್ಳಿ ಹೇಳಿತು, 'ಹಿಡಿಯಲು ನಿನಗೆ ಯಾವ ಮೀನು ಸಿಕ್ಕಲಿಲ್ಲವೆಂದೂ, ಅದಕ್ಕಾಗಿ ಏನನ್ನೂ ತರದೆ ಬರಬೇಕಾಯಿತೆಂದೂ ನೀನು ರಾಜನಿಗೆ ತಿಳಿಸು. ಈ ರಾಜನ ವಿಚಾರದಲ್ಲಿ ನೀನು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಇಂದಲ್ಲ ನಾಳೆ ನಾನು ಅವನನ್ನು ಕೊಂದು ರಾಜನಾಗುತ್ತೇನೆ. ಆಗ ನಿನ್ನನ್ನು ಹೆಚ್ಚು ಶ್ರಮವನ್ನಪೇಕ್ಷಿಸದ ಉತ್ತಮ ಪದವಿಗೇರಿಸುತ್ತೇನೆ'

ಕಪಿಯೂ ಕಪ್ಪೆಯೂ ರಾಜನ ಬಳಿಗೆ ಹೋದವು. ತಾವು ಹಣ್ಣನ್ನಾಗಲೀ ಮೀನನ್ನಾಗಲಿ ತರದೇ ಹೋದುದಕ್ಕೆ ಅವು ಸಿಕ್ಕದಿದ್ದುದೇ ಕಾರಣವೆಂದು ಹೇಳಿದವು. ಕಪಿ ಹೇಳಿತು: 'ನಾನೇ ಸ್ವತಃ ಎಲ್ಲೆಲ್ಲೂ ಹುಡುಕಿದೆ; ಬೀಳುವುದನ್ನೂ ಲೆಕ್ಕಿಸದೆ ನೂರಾರು ಮರಗಳನ್ನು ಹತ್ತಿದೆ. ಮೈಯೆಲ್ಲ – ನೋಡು, ಹೀಗೆ – ದೂಳಾಯಿತು. ಏನು ಮಾಡಲಿ? ಹಣ್ಣು ಸಿಕ್ಕಲಿಲ್ಲ. ಆದರೆ ಈ ಕಪ್ಪೆಯನ್ನು ನೋಡು. ಅದು ಹಗಲೆಲ್ಲ ಹೊಳೆಯಲ್ಲಿ ಸ್ನಾನ ಮಾಡಿದ್ದೂ ಮಾಡಿದ್ದೇ! ಒಂದು ಮೀನನ್ನೂ ಅದು ಹಿಡಿಯುವ ಗೋಜಿಗೇ ಹೋಗಲಿಲ್ಲ. ಮೀನನ್ನು ಹಿಡಿಯಲು ಅದು ಪ್ರಯತ್ನವನ್ನಾದರೂ ಮಾಡಿದ್ದರೆ, ಅದರ ಮೈ ಇಷ್ಟು ಶುಭ್ರವಾಗಿರುತ್ತಿತ್ತೆ?'

ರಾಜ ಮಣ್ಣಾಗಿದ್ದ ಕಪಿಯ ಮೈಯನ್ನೂ, ಶುಚಿಯಾಗಿ ಹೊಳೆಯುತ್ತಿದ್ದ ಕಪ್ಪೆಯ ಮೈಯನ್ನೂ ನೋಡಿದನು. ಅವನಿಗೆ ತುಂಬಾ ಕೋಪ ಬಂತು. 'ನೀನು ಅಲ್ಲಿಗೆ ಹೋದದ್ದು ಮೀನು ಹಿಡಿಯುವುದಕ್ಕೋ, ಸ್ನಾನ ಮಾಡುವುದಕ್ಕೋ?' ಎಂದು ಅಬ್ಬರಿಸಿ ಕಪ್ಪೆಯ ತಲೆಯ ಮೇಲೆ ಬಲವಾಗಿ ಹೊಡೆದನು. ಇಂದಿಗೂ ಕಪ್ಪೆಯ ನೆತ್ತಿ ಚಪ್ಪಟೆಯಾಗಿರುವುದಕ್ಕೆ ಇದೇ ಕಾರಣ.

ಕಪ್ಪೆಗೂ ಸಿಟ್ಟುಬಂತು; ಕಪಿ ತನಗೆ ಹೇಳಿದ್ದನ್ನೆಲ್ಲ ರಾಜನ ಮುಂದೆ ವಿವರಿಸಿತು. ಥಟ್ಟನೆ ಎದ್ದು ಹೊರಟುಹೋಗಿ ಹೊಳೆಯನ್ನು ಸೇರಿತು. ಅಂದಿನಿಂದಲೂ ಅದು ಅಲ್ಲೇ ವಾಸಮಾಡುತ್ತಿದೆ.

ಆ ಕಾಲದಲ್ಲಿ ಕಪಿಗಳಿಗೆ ಬಾಲವಿರಲಿಲ್ಲ. ಒಂದು ದಿನ ಕಪಿ ಕಾಡಿಗೆ ಹೋಯಿತು. ತನ್ನ ಬಂಧುಗಳನ್ನು ಕರೆಸಿಕೊಂಡು ಒಂದು ದಂಡನ್ನು ಕಟ್ಟಿತು. ಅವುಗಳಿಗೆ ಬಿಲ್ಲು ಬಾಣಗಳನ್ನು ಒದಗಿಸಿ, ಅರಮನೆಗೆ ಮುತ್ತಿಗೆ ಹಾಕಿ ರಾಜನನ್ನು ಕೊಲ್ಲಲು ಎಲ್ಲ ಸಿದ್ಧತೆಗಳನ್ನೂ ಮಾಡಿಕೊಂಡಿತು.

ಕಪಿಯ ಪಿತೂರಿ ರಾಜನ ಕಿವಿಯನ್ನು ಮುಟ್ಟಿತು. ಇದಕ್ಕೆ ಸರಿಯಾಗಿ ಬುದ್ಧಿ ಕಲಿಸುವೆನೆಂದು ನಿರ್ಧರಿಸಿದನು. ಕಪ್ಪು ಬಣ್ಣದ ಸರಿಯನ್ನು ಮಾಡಿಸಿ ಅದನ್ನು ತನ್ನ ಮುಖಕ್ಕೆಲ್ಲ ಬಳಿದುಕೊಂಡು ತನ್ನ ಶತ್ರುಗಳು ಬಳಿಗೆ ಬರಲೆಂದು ಸ್ವಸ್ಥವಾಗಿ ಕಾದಿದ್ದನು.

ಕಪಿ ತನ್ನ ದಂಡನ್ನು ಮರಗಳ ಹಿಂದೆ ನಿಲ್ಲಿಸಿ, ಒಂಟಿಯಾಗಿ ರಾಜನ ಬಳಿಗೆ ಬಂತು. ರಾಜನ ಮುಖದ ಮೇಲಿದ್ದ ಅಲಂಕಾರಗಳನ್ನು ನೋಡಿ ಅದಕ್ಕೆ ಬಹಳ ಸಂತೋಷವಾಯಿತು. 'ಈ ಬಣ್ಣದ ಸರಿ ನಿನಗೆ ಎಲ್ಲಿ ಸಿಕ್ಕಿತು? ನನಗೂ ಸ್ವಲ್ಪ ಬೇಕು' ಎಂದಿತು.

ರಾಜ ಹೇಳಿದನು, 'ಒಂದು ದೊಡ್ಡ ಮರವಿತ್ತು! ನಾನು ಅದರ ಪೊಟ್ಟರೆಯ ಬಳಿಗೆ ಹೋದೆ. ನನ್ನ ಸೇವಕರು ನನ್ನನ್ನು ಅದರೊಳಗೆ ಸೇರಿಸಿದರು. ಅದರ ಸುತ್ತಲೂ ಬೇಕಾದಷ್ಟು ಸೌದೆಯನ್ನು ಒಟ್ಟಿ ಬೆಂಕಿಯಿಟ್ಟರು. ಅದರ ಹೊಗೆಯಿಂದ ನನ್ನ ಮುಖ ಕಪ್ಪಾಯಿತು. ನೀನೂ ನನ್ನಷ್ಟೇ ಸುಂದರವಾಗಿ ಕಾಣಬೇಕಾದರೆ, ಹಾಗೆಯೇ ಮಾಡಬೇಕು'.

ಕಪಿ ತನ್ನ ಬಂಧುಗಳನ್ನು ಬಳಿಗೆ ಕರೆಯಿತು. ಒಂದು ದೊಡ್ಡ ಮರದ ಪೊಟ್ಟರೆಯ ಸುತ್ತ ಅವರು ಸೌದೆಯನ್ನು ತಂದು ಹಾಕಿದರು. ಆಗ ರಾಜ ಎಲ್ಲಾ ಕಪಿಗಳನ್ನೂ, ಒಂದಕ್ಕೆ ಇನ್ನೊಂದನ್ನು ಗಂಟು ಹಾಕಿ, ಮರದ ಪೊಟ್ಟರೆಯೊಳಗೆ ಕಳಿಸಿದನು. ಎಲ್ಲವೂ ಒಳಗೆ ಹೋಗಿ ಸೇರಿಕೊಂಡ ಮೇಲೆ ಅದಕ್ಕೆ ಬೆಂಕಿ ತೋರಿಸಿದನು. ಸ್ವಲ್ಪ ಹೊತ್ತಿನಲ್ಲೇ ಕಪಿಗಳ ಆರ್ತನಾದ ಕೇಳಿ ಬಂತು, 'ನಮ್ಮನ್ನು ಹೊರಗೆ ಬಿಡು, ನಮ್ಮನ್ನು ಹೊರಗೆ ಬಿಡು, ನಾವು ತುಂಬಾ ಕಪ್ಪಾಗಿದ್ದೇವೆ.' ಆದರೆ ರಾಜ ಇನ್ನೂ ಸೌದೆಯನ್ನು ತಂದು ರಾಶಿ ಹಾಕುತ್ತಲೇ ಇದ್ದನು ಕಪಿಗಳೆಲ್ಲ ಸುಟ್ಟು ಭಸ್ಮವಾದವು.

ಆದರೂ ಒಂದು ಹೆಣ್ಣು ಕಪಿ ಬೆಂಕಿಯಿಂದ ತಪ್ಪಿಸಿಕೊಂಡು ಹೇಗೋ ಮರದ ತುದಿಗೆ ಏರಿಹೋಯಿತು; ಏಕೆಂದರೆ ಅದಕ್ಕೆ ಕಟ್ಟಿದ್ದ ಹಗ್ಗ ಸುಟ್ಟಿತ್ತು. ಅದರ ಒಂದು ಚೂರು ಕಪಿಯ ಬೆನ್ನ ಕೆಳಗೆ ನೇತಾಡುತ್ತಿತ್ತು. ಇದು ಅದರ ಬಾಲವಾಯಿತು. ಆ ಕಪಿಯೇ ಸಮಸ್ತ ನೂತನ ಕಪಿವಂಶದ ತಾಯಿಯಾಯಿತು.

## ಕಪ್ಪುನಾಯಿ

ಗುಡ್ಡಗಾಡಿನ ಜನರಿಗೆ ಹುಲಿಯ ವಿಷಯ ತುಂಬಾ ಆಕರ್ಷಕವಾಗಿರುವುದು ಸಹಜವೇ ಅವರು ಅದರ ವಿಷಯದಲ್ಲಿ ನೂರಾರು ಕಥೆಗಳನ್ನು ಹೇಳುತ್ತಾರೆ. ಅದು ಮಾನವ ವಂಶಕ್ಕೆ ಸೇರಿದ್ದೆನ್ನುತ್ತಾರೆ ಕೆಲವರು; ಸೋದರರಿಬ್ಬರಲ್ಲಿ ತಪ್ಪು ಹಾದಿ ಹಿಡಿದವನು ಹುಲಿಯಾದನೆನ್ನುತ್ತಾರೆ ಇನ್ನುಕೆಲವರು. ಈಶಾನ್ಯದ ಗಡಿನಾಡಿನ ಅನೇಕ ಹಳ್ಳಿಗಳಲ್ಲಿ ಈ ಕಥೆ ಒಂದಲ್ಲ ಒಂದು ರೂಪದಲ್ಲಿ ಪ್ರಚಲಿತವಾಗಿದೆ.

ನಿಸ್ನೋ ಮತ್ತು ನಿಯೂ ಸೋದರರು. ಸಿಪಿನದಿಯ ದಡದ ದಟ್ಟವಾದ ಅಡವಿಯಲ್ಲಿ ಬೇಟೆಯಾಡಲು ಇಬ್ಬರೂ ಹೋಗುತ್ತಿದ್ದರು. ಅಳಿಲುಗಳಿಗೂ ಹಕ್ಕಿಗಳಿಗೂ ಬಲೆಗಳನ್ನು ಕಟ್ಟಿ ಪ್ರತಿ ಸಂಜೆಯೂ ಮನೆಗೆ ಬರುತ್ತಿದ್ದರು. ಆದರೆ ಅಣ್ಣ ನಿಸ್ನೋ ಬೆಳಗಿಗೆ ಮುನ್ನವೇ ಎದ್ದು ಅಲ್ಲಿಗೆ ಹೋಗಿ ಆ ಬಲೆಗಳಲ್ಲಿ ಸಿಕ್ಕಿ ಬಿದ್ದಿದ್ದ ಪ್ರಾಣಿಗಳಲ್ಲಿ ಅರ್ಧವನ್ನು ತಿಂದುಬಿಡುತ್ತಿದ್ದನು ಅದನ್ನು ಬೇಯಿಸುತ್ತಿರಲಿಲ್ಲ; ಹಸಿಯ ಮಾಂಸವನ್ನೇ ತಿನ್ನುತ್ತಿದ್ದನು. ತಮ್ಮ ನಿಯೂ ಏಳುವುದಕ್ಕೆ ಮೊದಲೇ ಅವನು ಮನೆಗೆ ಬಂದು ಮಲಗಿ ತಾನು ರಾತ್ರಿಯೆಲ್ಲಾ ನಿದ್ದೆಮಾಡುತ್ತಿದ್ದಂತೆಯೇ ನಟಿಸುತ್ತಿದ್ದನು.



ಆ ಬಳಿಕ ಇಬ್ಬರೂ ಒಟ್ಟಿಗೆ ಕಾಡಿಗೆ ಹೋದಾಗ ಯಾರೋ ತಮ್ಮ ಬಲೆಗಳಲ್ಲಿ ಬಿದ್ದದ್ದನ್ನು ಕದ್ದಿರುವುದನ್ನು ಕಾಣುತ್ತಿದ್ದರು; ನಿಯೂ ಅಷ್ಟೊಂದು ಹಸಿಯ ಮಾಂಸವನ್ನು ತಿಂದಿರುವವನು ಎಂಥವನಿರಬೇಕೆಂದು ಆಶ್ಚರ್ಯಪಡುತ್ತಿದ್ದನು.

ಹಲವು ಕಾಲ ಹೀಗೆಯೇ ನಡೆಯಿತು. ಒಂದು ಸಂಜೆ ನಿಯೂ ತುಂಬಾ ದಣಿದು ಬಂದವನಂತೆ ನಟಿಸಿ ಹಾಸಿಗೆಯ ಮೇಲೆ ಉರುಳಿದನು. ಆದರೆ ನಿಸ್ಸೋವಿಗೆ ನಿದ್ದೆ ಬಂದ ಕೂಡಲೆ ಅವನು ಸದ್ದು ಮಾಡದೆ ಎದ್ದು ತಾವು ಬಲೆಯೊಡ್ಡಿದ್ದ ಸ್ಥಳಕ್ಕೆ ಹೋಗಿ ಅಲ್ಲೇ ಹತ್ತಿರದ

ಮರದ ಹಿಂದೆ ಅವಿತುಕೊಂಡು ನೋಡುತ್ತಿದ್ದನು. ಇನ್ನೂ ಬೆಳಗಿಗೆ ಮುನ್ನವೇ ಅಣ್ಣ ಅಲ್ಲಿಗೆ ಬಂದು ಬಲೆಯಲ್ಲಿ ಬಿದ್ದಿದ್ದ ಅಳಿಲನ್ನು ಸಿಗಿದು ತಿನ್ನುವುದನ್ನು ಕಣ್ಣಾರೆ ಕಂಡನು.

ನಿಯೂ ಗುಪ್ತ ಸ್ಥಳದಿಂದ ಹೊರಗೆ ಬಂದು ಕೂಗಿದನು, 'ಅಣ್ಣ! ನೀನು ಹೀಗೇಕೆ ಮಾಡುವೆ? ಇವು ನಮ್ಮಿಬ್ಬರಿಗೂ ಸೇರಿದವು. ತೆಗೆದುಕೊಂಡು ಹೋಗು! ಸರಿಯಾಗಿ ಬೇಯಿಸಿ ತಿನ್ನು!'

ಆಗ ನಿಸ್ಸೋ ಹೇಳಿದನು, 'ನನಗೆ ಶಕ್ತಿ ಬರುವುದು ಹಸಿಯ ಮಾಂಸದಿಂದಲೇ. ನನ್ನ ರೀತಿ ನಿನಗೆ ಒಪ್ಪಿಗೆಯಾಗದಿದ್ದರೆ ನನಗೆ ವ್ಯಸನವಾಗುತ್ತದೆ. ನಾನು ಇಂದಿನಿಂದ ಕಾಡಿನಲ್ಲೇ ವಾಸಮಾಡುತ್ತೇನೆ; ಹಸಿಯ ಮಾಂಸವನ್ನೇ ತಿನ್ನುತ್ತೇನೆ. ನಾನು ಬಹು ಕಾಲದಿಂದಲೂ ನಿನ್ನ ಪಾಲಿನ ಆಹಾರವನ್ನೂ ಕದ್ದಿದ್ದೇನೆ. ಇದುವರೆಗೆ ಆದದ್ದು ಆಯಿತು. ನಿನ್ನ ಸಾಲವನ್ನೂ ತೀರಿಸುತ್ತೇನೆ. ನಿನಗೆ ನನ್ನ ಕೈಲಾದಷ್ಟು ಸಹಾಯವನ್ನು ಮಾಡುತ್ತೇನೆ.'

ಹೀಗೆ ಮಾತಾಡುತ್ತಿದ್ದಂತೆಯೇ ಅವನಿಗೆ ಹುಲಿಯ ರೂಪ ಬಂತು. ಅವನು ಮತ್ತೆ ಹೇಳಿದನು, 'ನೀನು ಬೇಟೆಗೆ ಹೋದಾಗೆಲ್ಲ ನಾನು ಸಹಾಯ ಮಾಡುತ್ತೇನೆ. ಆದರೆ ಒಂದು ಮಾತು; ನಿಮ್ಮ ಅಣ್ಣ ಹಸಿಯ ಮಾಂಸವನ್ನು ತಿನ್ನುವುದಕ್ಕಾಗಿಯೇ ಹುಲಿಯಾದನೆಂದು ನೀನು ಯಾರಿಗೂ ಹೇಳಬಾರದು. ಒಂದು ವೇಳೆ ನೀನು ಯಾರಿಗಾದರೂ ಹೇಳಿದ್ದೇ ಆದರೆ, ನನ್ನ ಕಿವಿಗೆ ಅದು ಬಿದ್ದದ್ದೇ ಆದರೆ, ಆಗ ನಾನು ಒಂದು ಕಪ್ಪು ನಾಯಿಯ ರೂಪವನ್ನು ತೊಟ್ಟು, ನಿನ್ನನ್ನು ಅಟ್ಟಿ ಬರುತ್ತೇನೆ. ನಮ್ಮಿಬ್ಬರ ನಡುವೆ ಯುದ್ಧವಾಗುತ್ತದೆ. ನೀನು ನನ್ನನ್ನು ಕೊಂದೆಯಾದರೆ, ಸರಿ; ಇಲ್ಲವೇ ನಾನು ನಿನ್ನನ್ನು ಕೊಲ್ಲುತ್ತೇನೆ.'

ಇಂಥ ನಿರಾಶೆಯ ಮಾತಿಗೆ ಅವಕಾಶವಿರಲಿಲ್ಲವೆಂದೂ, ತಾನು ಯಾರಿಗೂ ಈ ಸಂಗತಿಯನ್ನು ಹೇಳುವುದಿಲ್ಲವೆಂದೂ ನಿಯೂ ಉತ್ತರ ಕೊಟ್ಟನು. ಹುಲಿ ಸಂತೃಪ್ತಿಯಿಂದ ಕಾಡಿಗೆ ಹೋಯಿತು.

ಇದಾದ ಮೇಲೆ ನಿಯೂ ಬೇಟೆಗಾಗಿ ಆಗಾಗ ಕಾಡಿಗೆ ಹೋಗುತ್ತಿದ್ದನು. ಆ ಸಮಯದಲ್ಲೆಲ್ಲ ಅವನ ಹುಲಿಯಣ್ಣ ಒಂದು ಜಿಂಕೆಯನ್ನೋ ಕಾಡುಹಂದಿಯನ್ನೋ ಹಿಡಿದುಕೊಡುತ್ತಿತ್ತು. ಹೀಗಾಗಿ ನಿಯೂ ಸುಖಿಯಾದನು, ಸಿರಿವಂತನಾದನು; ಅವನಿಗೆ ಬೊಜ್ಜು ಬೆಳೆಯಿತು. ಕಾಲಕ್ರಮದಲ್ಲಿ ಅವನೂ ಮುದುಕನಾದನು. ಒಂದು ದಿನ ಅಗ್ಗಿಷ್ಟಿಕೆಯ ಸುತ್ತ ಕುಳಿತಿದ್ದ ಅವನ ಮಕ್ಕಳೂ ಮೊಮ್ಮಕ್ಕಳೂ ನಿಸ್ಸೋವಿನ ವಿಷಯದಲ್ಲಿ ಪ್ರಶ್ನೆ ಕೇಳಿದವು: 'ನಮ್ಮ ದೊಡ್ಡಪ್ಪ ಇದ್ದನಲ್ಲ, ಅವನೆಲ್ಲಿಗೆ ಹೋದ?' ನಿಯೂ ಆ ಪ್ರಶ್ನೆಯನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ಮೌನವಾಗಿದ್ದನು. ಏಕೆಂದರೆ ಅವನನ್ನು ಕಪ್ಪುನಾಯಿಯ ಭೀತಿ ಪೀಡಿಸುತ್ತಿತ್ತು.

ನಿಯೂ ಇನ್ನೂ ಮುದುಕನಾದನು; ಶಕ್ತಿಯುಡುಗಿತು; ಮನೆಯನ್ನು ಬಿಟ್ಟು ಹೊರಗೆ ಹೋಗುವಷ್ಟೂ ತ್ರಾಣವಿರಲಿಲ್ಲ. ಮಕ್ಕಳು ತಮ್ಮ ದೊಡ್ಡಪ್ಪನ ವಿಷಯವಾಗಿ ಪ್ರಶ್ನೆ ಕೇಳಿ ಪೀಡಿಸುತ್ತಲೇ ಇದ್ದವು. 'ನನಗೂ ಈಗ ವಯಸ್ಸಾಗಿದೆ; ನನ್ನ ಬೇಟೆಯ ಕಾಲ ಮುಗಿಯಿತು. ಈಗ ಕಪ್ಪು ನಾಯಿ ಬಂದರೂ ನನ್ನನ್ನೇನು ಮಾಡೀತು!' ಎಂದು ಕೊಂಡು ನಿಯೂ ಹಿಂದೆ ನಡೆದದ್ದನ್ನೆಲ್ಲ ಮಕ್ಕಳಿಗೆ ತಿಳಿಸಿಬಿಟ್ಟನು.

ಇವನು ಹೇಳುತ್ತಿದ್ದುದನ್ನು ನಿಸ್ಲೋ ಕೇಳುತ್ತಿದ್ದನು. ಕಪ್ಪು ನಾಯಿಯ ರೂಪವನ್ನು ತಾಳಿ ಆ ಮನೆಯ ಕೆಳಗೆ ಬಂದು ಕುಳಿತನು. (ಮನೆಯ ಕೆಳಗೆ – ಏಕೆಂದರೆ, ಗುಡ್ಡಗಾಡಿನಲ್ಲಿ ನೆಲಕ್ಕೆ ಸ್ವಲ್ಪ ಮೇಲೆ, ಅಟ್ಟಣಿಗೆಗಳ ಮೇಲೆ ಮನೆ ಕಟ್ಟುತ್ತಾರೆ.) ಆಗ ನಿಯೂ ಅಗ್ಗಿಷ್ಟಿಕೆಯ ಮುಂದೆ ಕುಳಿತು ತಲೆಯನ್ನು ಬಾಚಿಕೊಳ್ಳುತ್ತಿದ್ದನು. ಆಕಸ್ಮಾತ್ತಾಗಿ ಅವನ ಕೈಲಿದ್ದ ಬಾಚಣಿಗೆ ಕೆಳಗೆ ಬಿತ್ತು; ಅಟ್ಟಣಿಯ ಮೂಲಕ ತೂರಿ ನೆಲದಮೇಲೆ ಬಿತ್ತು. ನಿಯೂ ತನ್ನ ಮಕ್ಕಳಲ್ಲಿ ಒಬ್ಬನನ್ನು ಕರೆದು ಹೇಳಿದನು, 'ಬಾಚಣಿಗೆ ಕೆಳಗೆ ಬಿದ್ದು ಹೋಯಿತು; ಹೋಗಿ ಅದನ್ನು ತೆಗೆದುಕೊಂಡು ಬಾ!' ಆ ಹುಡುಗ ಕೆಳಗಿಳಿದು ನೋಡಿದಾಗ ಬಾಚಣಿಗೆ ಅವನಿಗೆ ಕಾಣಿಸಲಿಲ್ಲ. ಕಪ್ಪು ನಾಯಿ ಅದರ ಮೇಲೆ ಕುಳಿತಿತ್ತು. ಅವನು ತಂದೆಯ ಬಳಿಗೆ ಹೋಗಿ ಈ ಸಂಗತಿಯನ್ನು ತಿಳಿಸಿದನು.

ಆಗ ಕಪ್ಪು ನಾಯಿ ಸ್ವಲ್ಪ ಜರುಗಿತು. ಬಾಚಣಿಗೆಯ ಸ್ವಲ್ಪ ಭಾಗ ಕಾಣಿಸಿತು.ಅವನು ಅಟ್ಟಣಿಯ ಬಿರುಕಿನ ಮೂಲಕ ನೋಡಿದಾಗ ಬಾಚಣಿಗೆಯೂ ಅದರ ಮೇಲೆ ಕುಳಿತಿರುವ ಕಪ್ಪುನಾಯಿಯೂ ಕಣ್ಣಿಗೆ ಬಿದ್ದವು. ಬಿಲ್ಲು ಬಾಣಗಳನ್ನು ಹಿಡಿದು ಸ್ವಲ್ಪ ಪ್ರಯಾಸದಿಂದಲೇ ಅವನು ಇಳಿದು ಬಂದನು. ಆಗ ನಿಸ್ಲೋ ಹುಲಿಯ ರೂಪವನ್ನು ತಾಳಿ ತನ್ನ ತಮ್ಮನ ಮೇಲೆ ಬಿದ್ದನು. ಆ ಕೂಡಲೆ ನಿಯೂ ಅವನ ಮೇಲೆ ಬಾಣವನ್ನು ಪ್ರಯೋಗಿಸಿದನು. ಅದು ಹುಲಿಯನ್ನು ಇರಿದು ಕೊಂದಿತು. ಆದರೆ ಹುಲಿಯ ರಭಸ ನಿಯೂವನ್ನು ಭೂಮಿಗೆ ಕೆಡವಿತು; ಅವನಿಗೆ ವಯಸ್ಸೂ ಆಗಿತ್ತು; ತೀರಿಕೊಂಡನು.

## ಇಬ್ಬರು ಸ್ನೇಹಿತರು

ಹುಲಿಯೂ ಕಪ್ಪೆಯೂ ಸ್ನೇಹಿತರು. ಕಪ್ಪೆ ಹುಲಿಯ ಮನೆಗೆ ಹೋಗಿ ಬರುತ್ತಿತ್ತು. ಹುಲಿ ಯಾವಾಗಲೂ ಅದಕ್ಕೆ ಪುಷ್ಕಳವಾದ ಮಾಂಸದೌತಣವನ್ನು ಕೊಡುತ್ತಿತ್ತು. ಒಂದು ದಿನ ಕಪ್ಪೆ ಹೇಳಿತು, 'ಸ್ನೇಹಿತನೆ, ನಿನ್ನ ಮನೆಗೆ ಯಾವಾಗ ಬಂದರೂ ನೀನು ನನಗೆ ಒಳ್ಳೆಯ ಊಟವನ್ನು ಹಾಕುತ್ತಿದ್ದೀಯೆ. ನೀನೂ ನನ್ನ ಮನೆಗೆ ಒಂದು ಸಲ ಬರಬೇಕು.' ಹುಲಿ ಹೇಳಿತು, 'ನಾನು ಮಾಂಸಾಹಾರಿ; ನೀನು ನನಗೆ ಮಾಂಸವನ್ನು ಬಡಿಸುವೆಯಾದರೆ, ನಿನ್ನ ಮನೆಗೆ ಖಂಡಿತವಾಗಿಯೂ ಬರುತ್ತೇನೆ.' ಕಪ್ಪೆ ಹೇಳಿತು, 'ಆಗಲಿ, ನಿನಗೆ ಇಷ್ಟವಾದುದನ್ನೇ ಒದಗಿಸುತ್ತೇನೆ; ನನ್ನ ಮನೆಗೆ ನಾಳೆಯೇ ಬಂದು ಬಿಡು.'

ಕಪ್ಪೆ ತನ್ನ ಸ್ನೇಹಿತನ ಅಂತಸ್ತಿಗೆ ತಕ್ಕ ಆಹಾರವನ್ನು ಹೇಗೆ ಒದಗಿಸುವುದೆಂದು ಚಿಂತಿಸುತ್ತಲೇ ಮನೆಗೆ ಹಿಂದಿರುಗಿತು. ಮಾಂಸವನ್ನು ತರುವುದಕ್ಕಾಗಿ ಅದು ಹೊರಟಿತು. ಹೊಳೆಯಂಚಿನಲ್ಲಿ ಹೋಗುತ್ತಿದ್ದಾಗ ಒಂದು ಕುದುರೆ ಸಿಕ್ಕಿತು. ಅದು ಅಲ್ಲಿಗೆ ನೀರು ಕುಡಿಯಲು ಬಂದಿತ್ತು. ಕಪ್ಪೆ ಅದರ ಬೆನ್ನಮೇಲೆ ಹತ್ತಿ ಒಂದಿಷ್ಟು ಮಾಂಸವನ್ನು ಕೀಳತೊಡಗಿತು. ಕುದುರೆ ಒದೆದು ಅದರ ಕಾಲುಗಳನ್ನು ಮುರಿಯಿತು. ನೆಟ್ಟಗೆ ನಡೆಯುವುದು ಕಪ್ಪೆಗೆ ಇಂದಿಗೂ ಅಸಾಧ್ಯವಾಗಿರುವುದು ಈ ಕಾರಣದಿಂದಲೇ.

ನೋವಿನಿಂದ ತೆವಳುತ್ತಾ ಕಪ್ಪೆ ಮನೆಗೆ ಬಂತು. ಸ್ವಲ್ಪ ಹೊತ್ತಿಗೆ ಹುಲಿಯೂ ಅಲ್ಲಿಗೆ ಆಗಮಿಸಿತು. ಕಪ್ಪೆ ತನ್ನ ಅತಿಥಿಯನ್ನು ಗೌರವದಿಂದ ಸ್ವಾಗತಿಸಿತಾದರೂ ಅದಕ್ಕೆ

ಉಣಬಡಿಸಲು ಮಾಂಸವಿರದಿದ್ದುದರಿಂದ ತುಂಬಾ ಸಂಕೋಚಪಟ್ಟಿತು. ಆದರೂ ಕಡೆಯ ಪ್ರಯತ್ನವೆಂದು ಅದು ಅಟ್ಟಕ್ಕೆ ಮೆಲ್ಲಗೆ ಹತ್ತಿಹೋಗಿ ತನ್ನ ಕಾಲುಗಳಲ್ಲಿರುವ ಮಾಂಸವನ್ನೇ ಕೀಳತೊಡಗಿತು. ಆಗ ತುಂಬಾ ನೋವಾಯಿತು; 'ಅಮ್ಮಾ, ನಾನು ಸತ್ತೆ' ಎಂದು ಗೋಳಾಡಿತು.

ಇದನ್ನು ಕೇಳಿದ ಹುಲಿ ಅಟ್ಟಕ್ಕೆ ಹತ್ತಿ ನೋಡಿತು. ಕಪ್ಪೆ ತನ್ನ ಮಾಂಸವನ್ನೇ ಕೀಳುತ್ತಿರುವುದನ್ನು ಕಂಡಿತು. ಹುಲಿ ವ್ಯಥೆಪಟ್ಟು ಹೇಳಿತು, 'ಸ್ನೇಹಿತನೆ, ನೀನು ಹೀಗೆ ಮಾಡುವ ಅಗತ್ಯವಿರಲಿಲ್ಲ. ಹೇಗಾದರೂ ನಾನು ನಿನ್ನ ಮಾಂಸವನ್ನು ತಿನ್ನುವುದಿಲ್ಲ.'

ಹುಲಿ ಕಪ್ಪೆಯನ್ನು ತನ್ನ ಕೈಲಾದಮಟ್ಟಿಗೆ ಸಮಾಧಾನಮಾಡಿ ಹೊರಟು ಹೋಯಿತು. ಕಪ್ಪೆ ತನಗಾದ ಅವಮಾನವನ್ನು ಸಹಿಸಲಾರದೆ ಮನೆಯನ್ನು ತೊರೆದು ಹೊಳೆಗೆ ಹೋಗಿ ವಾಸಿಸತೊಡಗಿತು.

ಕಪ್ಪೆ ಯಾವಾಗಲೂ ನೀರಿನಲ್ಲೇ ವಾಸ ಮಾಡುತ್ತಿರುವುದಕ್ಕೂ ಅದರ ಕಾಲುಗಳು ಬಲು ತೆಳ್ಳಗಿರುವುದಕ್ಕೂ ಇದೇ ಕಾರಣ.

## ಹಾರುವ ಆನೆಗಳು

ಆದಿಯಲ್ಲಿ ಆನೆಗಳಿಗೆ ರೆಕ್ಕೆಗಳಿದ್ದವು. ಅವುಗಳಿಗೆ ಹಾರಾಡುವ ಸಾಮರ್ಥ್ಯವಿತ್ತು ಎಂಬುದು ಸರ್ವಸಾಮಾನ್ಯವಾದ ನಂಬಿಕೆ. ಒರಿಸ್ಸದ ಸುಂದರ ಕಾನನಗಳಲ್ಲಿ ವಾಸಿಸುತ್ತಿರುವ ಸೌರರು ಹೇಳುವ ಕಥೆ, ಇದಕ್ಕೊಂದು ಮಾದರಿಯಾಗಿದೆ.

ಹಿಂದಿನ ಕಾಲದಲ್ಲಿ ಒಂದೊಂದು ಆನೆಗೂ ನಾಲ್ಕು ರೆಕ್ಕೆಗಳಿದ್ದವು. ಸಾಕ್ಷಾತ್ ಭಗವಂತನಿಗೇ ಅವುಗಳಲ್ಲಿ ಒಂದು ವಾಹನವಾಗಿತ್ತು. ಪ್ರಪಂಚ ನಿರ್ಮಾಣವಾದ ಮೇಲೆ ಮತ್ತು ಪೃಥ್ವಿಯಲ್ಲಿ ಮಾನವ ಜೀವನ ಪ್ರಾರಂಭವಾದ ಮೇಲೆ ಆನೆಗಳ ಹಾವಳಿ ಮಿತಿ ಮೀರಿತು. ಅವು ಹುಂಜಗಳಂತೆ ಕೂಗುತ್ತಾ ಆಕಾಶಕ್ಕೆ ಹಾರುತ್ತಿದ್ದವು. ತಮಗೆ ಆಯಾಸವಾದಾಗ ಅವು ಕೆಳಗಿಳಿದು ಮನೆಗಳ ಚಾವಣಿಯ ಮೇಲೆ ಕುಕ್ಕರಿಸುತ್ತಿದ್ದವು. ಅವುಗಳ ಭಾರದಿಂದ ಮನೆಗಳು ಕುಸಿದು ಬೀಳುತ್ತಿದ್ದವು.

ಈ ಪರಿಸ್ಥಿತಿ ದೇವರ ಕಿವಿಗೂ ಬಿದ್ದು ಅವನ ಮನಸ್ಸಿಗೆ ತುಂಬಾ ನೋವಾಯಿತು. 'ಇದಕ್ಕೆ ನಾನು ಏನಾದರೂ ಮಾಡಲೇ ಬೇಕಾಗಿದೆ' ಎಂದುಕೊಂಡನು. ಇದಕ್ಕಾಗಿ ಅವನು ಒಂದು ಔತಣವನ್ನು ಏರ್ಪಡಿಸಿ ಆನೆಗಳನ್ನು ಆಹ್ವಾನಿಸಿದನು. ಅವುಗಳಿಗೆ ಯಥೇಚ್ಛವಾಗಿ ಆಹಾರ ಪಾನೀಯಗಳನ್ನು ಒದಗಿಸಿದನು. ಅವು ಚೆನ್ನಾಗಿ ತಿಂದು ಕುಡಿದು ತೂರಾಡುತ್ತಾ ಒಂದು ಪ್ರಶಾಂತವಾದ ಸ್ಥಳದಲ್ಲಿ ಉರುಳಿಕೊಂಡು ನಿದ್ದೆ ಮಾಡಿದವು. ಅವು ನಿದ್ರಿಸುತ್ತಿರುವಾಗ ದೇವರು ಅವುಗಳ ರೆಕ್ಕೆಗಳನ್ನು ಕಡಿದು ಹಾಕಿದನು. ಆ ರೆಕ್ಕೆಗಳಲ್ಲಿ ಎರಡನ್ನು ನವಿಲಿಗೆ ಕೊಟ್ಟನು; ಏಕೆಂದರೆ ಆ ಕಾಲದಲ್ಲಿ ನವಿಲಿಗೆ ಪುಚ್ಛಗಳಿರಲಿಲ್ಲ. ಉಳಿದೆರಡನ್ನು ಬಾಳೆಯ ಗಿಡಕ್ಕೆ ಸಿಕ್ಕಿಸಿದನು. ಬಾಳೆಯ ಎಲೆ ದೊಡ್ಡದಾಗಿರುವುದಕ್ಕೆ ಇದೇ ಕಾರಣ.



ಎಚ್ಚರವಾದ ಮೇಲೆ ಅವು ನೋಡಿಕೊಂಡವು; ತಮಗೆ ರೆಕ್ಕೆಗಳೇ ಇರಲಿಲ್ಲ. ಅವುಗಳಿಗೆ ರೋಷವುಕ್ಕಿತು; ಕಾಡಿಗೆ ಓಡಿಹೋದವು. ಅಂದಿನಿಂದಲೂ ಅವುಗಳಿಗೆ ಮನುಷ್ಯರೆಂದರೆ ಭಯ.

# ಆಮೆ–ಮಗು

ಮೊದಲಿಗೆ ಮನುಷ್ಯಜಾತಿಯಲ್ಲಿ ಹುಟ್ಟಿದ್ದು ಆಮೇಲೆ ಅನೇಯ ರೂಪವನ್ನು ತಾಳಿದ ಆಮೆಯೊಂದರ ವಿಚಿತ್ರವಾದ ಕಥೆಯನ್ನು ಅಸ್ಸಾಮಿನ ಖಂಪ್ತಿಗಳು ಹೇಳುತ್ತಾರೆ. ಮನುಷ್ಯರ ಜೀವಿತದ ಮೇಲೆ ಪ್ರಭಾವವನ್ನು ಬೀರಬಲ್ಲ ಶುಭಾಶುಭ ಶಕ್ತಿಗಳು ಗಿರಿ ನದಿ ಕಾನನಗಳಲ್ಲಿ ಮನೆ ಮಾಡಿಕೊಂಡಿವೆ ಎಂಬುದು ಅನೇಕ ಹಳ್ಳಿಗರ ನಂಬಿಕೆಯಾಗಿದೆ. ಈ ಕಥೆಯಲ್ಲಿ ಬರುವ ಡಾವ್ರೋ ಒಂದು ವಿಧವಾದ ಕೈಬಾಚಿ, ಸಾರ್ವತ್ರಿಕವಾಗಿ ಒಳಕೆಯಲ್ಲಿರುವ ಒಂದು ಆಯುಧ. ಏಕೆಂದರೆ ಇದನ್ನು ಕಾಡನ್ನು ಸವರಲೂ ಮೃಗಗಳನ್ನು ಕೊಲ್ಲಲೂ ಉಪಯೋಗಿಸುತ್ತಾರೆ. ಹಿಂದಿನ ಕಾಲದ ಯುದ್ಧಗಳಲ್ಲಿ ಇದೊಂದು ಪ್ರಮುಖವಾದ ಅಸ್ತ್ರವಾಗಿತ್ತು.

ಒಂದಾನೊಂದು ಕಾಲದಲ್ಲಿ ಒಬ್ಬಾನೊಬ್ಬ ಮನುಷ್ಯನಿದ್ದನು; ಅವನಿಗೆ ಹೆಂಡತಿಯಿದ್ದಳು; ಮಕ್ಕಳಿರಲಿಲ್ಲ. ಅವರಿಗೆ ಮುಪ್ಪು ಒದಗಿತು; ಆಗ ಒಬ್ಬರಿಗೊಬ್ಬರು ಹೇಳಿಕೊಂಡರು, 'ನಾವು ಮುದುಕರಾಗುತ್ತಿದ್ದೇವೆ; ನಮಗೆ ಮಕ್ಕಳಿಲ್ಲ.' ತಮ್ಮ ಬಯಕೆಯ ಸಿದ್ಧಿಗಾಗಿ ಅವರು ಪವಿತ್ರ ವೃಕ್ಷವೊಂದರ ಬಳಿಗೆ ಹೋಗಿ ಪೂಜೆಯನ್ನು ಸಲ್ಲಿಸಿ ಬಲಿಯನ್ನು ನೀಡಿದರು. ಪ್ರತಿದಿನವೂ ಅದಕ್ಕೆ ನೀರೆರೆದು ನಮಸ್ಕಾರ ಮಾಡುತ್ತಿದ್ದರು. ಹೀಗೆ ಅನೇಕ ದಿನಗಳು ಮಾಡಿದ ಮೇಲೆ, ಆ ವೃಕ್ಷದಲ್ಲಿ ಒಂದು ಶಕ್ತಿ ಕಾಣಿಸಿಕೊಂಡು ಅವರನ್ನು ಕೇಳಿತು, 'ಇಷ್ಟು ದಿನವೂ ನೀವು ನನಗೆ ಈ ಪೂಜೆಯನ್ನು ಸಲ್ಲಿಸುತ್ತ ಬಂದಿರುವುದಕ್ಕೆ ಕಾರಣವೇನು?'

ಅವರು ಹೇಳಿದರು, 'ನಮಗೆ ಮುಪ್ಪು ಒದಗಿತು. ಆದರೂ ಒಂದು ಮಗುವಾದರೂ ಲಭಿಸಲಿಲ್ಲ. ಇದಕ್ಕಾಗಿ ನಾವು ನಿನಗೆ ಭಕ್ತಿಯಿಂದ ನೀರೆರೆದು, ನಮಗೊಂದು ಮಗುವನ್ನು ಕರುಣಿಸೆಂದು ಬೇಡುತ್ತಿದ್ದೇವೆ.'

ಆ ಶಕ್ತಿ ನುಡಿಯಿತು, 'ಶುಭಮಸ್ತು, ನಿಮಗೊಂದು ಮಗುವಾಗುತ್ತದೆ. ಇನ್ನು ಮುಂದೆ ನೀವು ಈ ಪೂಜೆಯನ್ನು ನಿಲ್ಲಿಸಬಹುದು'. ವೃಕ್ಷ–ಶಕ್ತಿಯ ವರವನ್ನು ಪಡೆದ ದಂಪತಿಗಳು ಮನೆಗೆ ಹಿಂದಿರುಗಿದರು.

ಅದೇ ದಿನ ಆ ಮುದುಕಿ ಗರ್ಭಿಣಿಯಾದಳು; ಹತ್ತು ತಿಂಗಳು ತುಂಬಿದ ಮೇಲೆ ಒಂದು ಆಮೆಯನ್ನು ಹೆತ್ತಳು. ಅದರ ತಂದೆ ತಾಯಿ ಪೇಚಾಡಿದರು. ಇಷ್ಟೆಲ್ಲಾ ಶ್ರಮ ಪಟ್ಟು ಆ ವೃಕ್ಷ ಶಕ್ತಿಯನ್ನು ಒಲಿಸಿಕೊಂಡದ್ದಕ್ಕೆ ಈ ಆಮೆಯೇ ಪ್ರತಿಫಲ! ಆಮೇಲೆ ಸಮಾಧಾನಮಾಡಿಕೊಂಡರು, 'ಕಡೆಗಾದರೂ ನಮಗೊಂದು ಮಗು, ಅದು ಆಮೆಯಾದರೂ ಸರಿಯೆ, ಲಭಿಸಿತಲ್ಲ.'

ಮುದುಕಿ ಆಮೆಗೆ ಎದೆಹಾಲನ್ನು ಕುಡಿಸಲೆತ್ನಿಸಿದಳು. ಅದು ಆಮೆಗೆ ಬೇಡವಾಯಿತು. ಅನ್ನ ಬೇಕೆಂದಿತು. ಮಗು ಎಲ್ಲೋ ಒಂದು ತುತ್ತು ಅನ್ನವನ್ನು ತಿನ್ನಬಹುದೆಂದುಕೊಂಡರು. ಆದರೆ ಅದು ಎರಡು ದೊಡ್ಡ ಮುದ್ದೆಗಳಷ್ಟನ್ನು ಕೇಳಿತು. ಎರಡನೆಯ ದಿನ ಎರಡು ಮುದ್ದೆ;

ಮೂರನೆಯ ದಿನ ಮೂರು ಮುದ್ದೆ; ನಾಲ್ಕನೆಯ ದಿನ ನಾಲ್ಕು ಮುದ್ದೆ; ಹೀಗೆ ದಿನಕ್ಕೊಂದು ಹೆಚ್ಚಿಗೆ ಮುದ್ದೆ; ಹೀಗೆ ತಿನ್ನುತ್ತ ಬಂದು ಅದು ಇಪ್ಪತ್ತನೆಯ ದಿನದ ಹೊತ್ತಿಗೆ ದಿನಕ್ಕೆ ಇಪ್ಪತ್ತು ಮುದ್ದೆ ಅನ್ನವನ್ನು ತಿಂದು ಹಾಕಿತು.

ತಮ್ಮ ಇಡೀ ಧಾನ್ಯ ಸಂಗ್ರಹವೆಲ್ಲಾ ಬರಿದಾಗುತ್ತ ಬಂದುದನ್ನು ಕಂಡು, ವೃದ್ಧ ದಂಪತಿಗಳಿಗೆ ಗಾಬರಿಯಾಯಿತು; ತಾವು ಸಂಸಾರಿಗಳಾಗುವುದಕ್ಕೆ ಹಿಂದೆ ಕಳೆದಿದ್ದ ಒಳ್ಳೆಯ ಕಾಲವನ್ನು ನೆನೆದು ನಿಟ್ಟುಸಿರೆಳೆದರು. 'ಇದು ಮನುಷ್ಯ ಜಾತಿಗೆ ಸೇರಿದ ಮಗುವೂ ಅಲ್ಲ; ಇದರ ದೆಸೆಯಿಂದ ನಾವು ನಾಶವಾಗುತ್ತೇವೆ. ಇಪ್ಪತ್ತು ದಿನಗಳ ವಯಸ್ಸಿಗೇ ಇದು ಇಷ್ಟನ್ನು ತಿನ್ನುತ್ತಿದ್ದರೆ, ಬೆಳೆದಮೇಲೆ ಇನ್ನೆಷ್ಟನ್ನು ತಿಂದೀತು?' ಎಂದುಕೊಂಡರು.

ಅವರು ಮತ್ತೆ ತಮ್ಮ ವೃಕ್ಷದ ಬಳಿಗೆ ಹೋಗಿ ಅಲ್ಲಿ ವಾಸಿಸುತ್ತಿದ್ದ ಶಕ್ತಿಯನ್ನು ಕೇಳಿಕೊಂಡರು, 'ಈ ಮಗು ನಮಗೆ ಬೇಡ. ದಯವಿಟ್ಟು ಇದನ್ನು ತೆಗೆದುಕೊಂಡುಬಿಡು.' ಆ ಶಕ್ತಿ ಇವರ ಪ್ರಾರ್ಥನೆಗೆ ಕಿವಿಗೊಡಲಿಲ್ಲ.

ಮಗುವಿಗೆ ತಂದೆ ತಾಯಿಗಳು ಐಲುಂಗ್ ಎಂದು ನಾಮಕರಣ ಮಾಡಿದರು. ವೃಕ್ಷಶಕ್ತಿ ಅದನ್ನು ಹಿಂದಕ್ಕೆ ತೆಗೆದುಕೊಳ್ಳದೆ ಹೋದದ್ದರಿಂದ, ತಾಯಿ ಮಗನಿಗೆ ಎಚ್ಚರಿಕೆ ಕೊಟ್ಟಳು, 'ನೀನು ನಮ್ಮ ಆಹಾರವಷ್ಟನ್ನೂ ತಿಂದು ಹಾಕುತ್ತಿದ್ದೀಯೆ. ಆದರೂ ಯಾವ ಕೆಲಸವನ್ನೂ ಮಾಡುತ್ತಿಲ್ಲ.'

ಐಲುಂಗ್ ಉತ್ತರ ಕೊಟ್ಟಿತು, 'ಅಮ್ಮ, ನನಗೊಂದು ಒಳ್ಳೆಯ ಕೈಬಾಚಿ(ಡಾವ್ರೋ) ಮಾಡಿಕೊಡುವಂತೆ ಅಪ್ಪನಿಗೆ ಹೇಳು.'

ತಾಯಿ ಹೇಳಿದಳು, 'ಐಲುಂಗ್, ಕೈಬಾಚಿಯಿಂದ ನೀನು ಏನು ಮಾಡುವೆ?'

ಅದು ನುಡಿಯಿತು, 'ನಾನು ಕಾಡಿಗೆ ಹೋಗಿ, ಅಲ್ಲಿ ಪೊಲಗೆಲಸ ಮಾಡುತ್ತೇನೆ.' ಕೈಯಿಲ್ಲದ ಮಗು ಡಾವ್ರೋವನ್ನು ಹೇಗೆ ಉಪಯೋಗಿಸಬಲ್ಲುದೆಂಬುದು ಅವಳಿಗೆ ಅರ್ಥವಾಗದಿದ್ದರೂ, 'ಐಲುಂಗನಿಗೆ ಒಂದು ಡಾವ್ರೋ ಬೇಕಂತೆ' ಎಂದು ತನ್ನ ಗಂಡನಿಗೆ ಹೇಳಿದಳು. ಅವನು ತನ್ನ ಮಗನಿಗೆ ಒಂದಲ್ಲ, ಎರಡು ಕೈಬಾಚಿಗಳನ್ನು ಮಾಡಿಕೊಟ್ಟನು.

ಐಲುಂಗ್ ಡಾವ್ರೋಗಳನ್ನು ಕಾಡಿಗೆ ಒಯ್ದನು. ಅಲ್ಲಿಗೆ ಹೋದಮೇಲೆ ಆನೆಯ ರೂಪವನ್ನು ಧರಿಸಿದನು; ಅವನು ಹಿಡಿದಿದ್ದ ಡಾವ್ರೋಗಳು ಆನೆಯ ದಂತಗಳಾದವು. ಒಂದೇ ದಿನದಲ್ಲಿ ಮೂರು ಬೆಟ್ಟಗಳ ಕಣಿವೆಗಳಲ್ಲಿದ್ದ ಎಲ್ಲಾ ಮರಗಳನ್ನೂ ತರಿದು ಹಾಕಿದನು. ಬೆಟ್ಟಗಳ ನಡುವೆ ಒಂದು ಎತ್ತರವಾದ ರಬ್ಬರ್ ಮರವಿತ್ತು. 'ಈ ಮರ ಸುಂದರವಾಗಿದೆ, ಇದರ ನೆರಳಿನಲ್ಲಿ ನಾನು ದಣಿವಾರಿಸಿಕೊಳ್ಳಬಹುದು' ಎಂದು ಆಲೋಚಿಸಿ, ಅದನ್ನು ಹಾಗೆಯೇ ಬಿಟ್ಟನು.

ಸಂಜೆಯಾಗುತ್ತಲೆ ಐಲುಂಗ್ ತನ್ನ ದಂತಗಳನ್ನು ತೆಗೆದು ಹಾಕಿದನು. ಅವುಗಳಿಗೆ ಮತ್ತೆ ಡಾವ್ರೋ ರೂಪ ಬಂತು. ತಾನು ಮತ್ತೆ ಆಮೆಯಾದನು. ಮನೆಗೆ ಹಿಂದಿರುಗಿದ ಮಗನನ್ನು ತಂದೆ ಕೇಳಿದನು, 'ನೀನು ಎಷ್ಟು ಕಾಡನ್ನು ಸವರಿದೆ?' ಮಗ ಹೇಳಿದನು, 'ಈಗ ನನ್ನನ್ನು ಕೇಳಬೇಡ. ನಾನು ಮಾಡುತ್ತಿರುವ ಕೆಲಸ ಮುಗಿಯಲಿ, ಬೆಳೆ ಕೊಯ್ಲಿಗೆ ಸಿದ್ಧವಾಗಲಿ, ಆಗ ನಿನಗೆ ತೋರಿಸುತ್ತೇನೆ.'

ಆ ರಬ್ಬರ್ ಮರದಲ್ಲಿ ಒಂದು ಮಹಾಭೂತವಿತ್ತು; ಅದಕ್ಕೆ ಬೇಕಾದಷ್ಟು ಮಕ್ಕಳಿದ್ದವು. ತನ್ನ ಕಾಡೆಲ್ಲಾ ನಾಶವಾದದ್ದನ್ನು ಕಂಡ ಭೂತ ತನ್ನ ಮರಕ್ಕೂ ಅದೇ ಗತಿಯೊದಗಿ ತಮಗೆ ವಾಸಮಾಡಲು ಸ್ಥಳವೇ ಇಲ್ಲದೆ ಹೋಗಬಹುದೆಂಬ ಭೀತಿಯಿಂದ ತನ್ನ ಮಕ್ಕಳನ್ನು ಕಾಡಿನ ತೆರವಿಗೆ ಕಳಿಸಿತು. ಅನಂತರ ತನ್ನ ಕೊಳಲನ್ನು ಊದತೊಡಗಿತು. ಅದು ಹಾಗೆ ಮಾಡುತ್ತಿರುವಾಗ ಆ ಮಕ್ಕಳು ಐಲುಂಗ್ ಮಾಡಿದ್ದ ತೆರವಿನಲ್ಲಿ ಮತ್ತೆ ಮರಗಳನ್ನೆಬ್ಬಿಸಿದವು. ಅದು ಹಿಂದಿದ್ದಂತೆಯೇ ಕಾಡಾಯಿತು. ಇಷ್ಟನ್ನೂ ಮಾಡಿದಮೇಲೆ ಆ ಮಕ್ಕಳು ರಬ್ಬರ್ ಗಿಡಕ್ಕೆ ಹಿಂದಿರುಗಿ ತಮ್ಮ ತಂದೆಯೊಂದಿಗೆ ಸುಖವಾಗಿದ್ದವು.

ಮರುದಿನ ಐಲುಂಗ್ ಅಲ್ಲಿಗೆ ಬಂದು, ತಾನು ಕಷ್ಟಪಟ್ಟು ಕಾಡನ್ನು ಸವರಿ ತೆರವು ಮಾಡಿದ ಬಳಿ ಮತ್ತೆ ಕಾಡು ತಲೆಯೆತ್ತಿರುವುದನ್ನು ಕಂಡು ಕಿಡಿಕಿಡಿಯಾದನು. ಆನೆಯ ಆಕಾರವನ್ನು ತಾಳಿ ಕಡು ರೋಷದಿಂದ ಕಾಡನ್ನು ಧ್ವಂಸ ಮಾಡಿದನು. ಈ ಸಲ ಯಾವ ಮರವನ್ನೂ ಉಳಿಸುವುದಿಲ್ಲವೆಂದು ಶಪಥ ಮಾಡಿದನು ಆದರೆ ರಬ್ಬರ್ ಮರದ ಬಳಿಗೆ ಬಂದಾಗ ಭೂತವೂ ಅದರ ಮಕ್ಕಳೂ ಈಚೆಗೆ ಬಂದು ಅವನ ಮೇಲೆ ಬಿದ್ದವು. ಐಲುಂಗ್ ಮಹಾಬಲಿಷ್ಠನಾಗಿದ್ದುದರಿಂದ, ಅವುಗಳ ಆಟ ನಡೆಯಲಿಲ್ಲ; ಶರಣಾಗತವಾದವು.

ವೃಕ್ಷಭೂತ ಹೇಳಿತು, 'ನೀನು ಹೇಳಿದಂತೆ ಕೇಳುತ್ತೇವೆ, ನಮ್ಮನ್ನು ಮಾತ್ರ ಕೊಲ್ಲಬೇಡ'.

ಐಲುಂಗ್ ಹೇಳಿದನು, 'ಹಾಗಾದರೆ ನಾನು ತರಿದ ಕಾಡಿಗೆ ಬೆಂಕಿಹಚ್ಚಿ; ತೆರವುಗಳನ್ನು ಸರಿಪಡಿಸಿ; ಆ ಬೂದಿ ರಾಶಿಗಳಲ್ಲಿ ಕಾಳನ್ನು ಬಿತ್ತಿ.'

ಆ ಭೂತವೂ ಅದರ ಮಕ್ಕಳೂ ತೆರವನ್ನು ಸರಿಪಡಿಸಿ, ಐಲುಂಗ್ ಕೊಟ್ಟ ಬೀಜದ ಬತ್ತವನ್ನು ಬಿತ್ತಿದವು. ಬೆಳೆ ಕಟಾವಿಗೆ ಸಿದ್ಧವಾದಾಗ ಐಲುಂಗನಿಗೆ ಆ ಭೂತದ ಮೇಲೂ, ಅದರ ಮಕ್ಕಳ ಮೇಲೂ ವಿಶ್ವಾಸವುಂಟಾಯಿತು. ಅವನು ಅವುಗಳಿಗೆ ಹೇಳಿದನು, 'ಇನ್ನೂ ಒಂದು ಕೆಲಸವನ್ನು ಮಾಡಿ. ಬೆಳೆಯನ್ನು ಕೊಯ್ದು, ಬಡಿದು, ಕೇರಿ ಕಾಳನ್ನು.' ಐಲುಂಗ್ ಪುನಃ ಆಮೆಯ ಆಕೃತಿಯನ್ನು ತಾಳಿ ಮನೆಗೆ ಬಂದನು. ತನ್ನ ತಂದೆ ತಾಯಿಗಳನ್ನು ಕಂಡು, 'ಬೆಳೆ ಸಿದ್ಧವಾಗಿದೆ; ಇಷ್ಟರಲ್ಲೇ ಆಳುಗಳು ಮನೆಗೆ ಅಕ್ಕಿಯನ್ನು ಹೊತ್ತು ತರುವವರಿದ್ದಾರೆ' ಎಂದನು. ತಮ್ಮ ಮಗ ಕಾಡನ್ನು ಕಡಿದು ಗದ್ದೆಯನ್ನು ಮಾಡಿ ಬೆಳೆಯನ್ನು ತೆಗೆದನೆಂಬುದನ್ನೇ ಅವರು ನಂಬುವ ಸ್ಥಿತಿಯಲ್ಲಿರಲಿಲ್ಲ. ಆದರೆ ಸ್ವಲ್ಪಹೊತ್ತಿಗೆ ಭೂತವೂ ಅದರ ಮಕ್ಕಳೂ ಬಂಡಿಗಟ್ಟಲೆ ಅಕ್ಕಿಯನ್ನು ತಮ್ಮ ಮನೆಗೆ ಸಾಗಿಸುತ್ತಿರುವುದನ್ನು ಕಂಡರು; ಅವರು ತಂದದ್ದನ್ನು ತುಂಬಲು ಇವರ ಮನೆಯಲ್ಲಿ ಸ್ಥಳವೇ ಇರಲಿಲ್ಲ. ಐಲುಂಗ್ ತನ್ನ ತಂದೆ ತಾಯಿಗಳಿಗೆ ಹೇಳಿದನು, ' ಈ ಆಳುಗಳಿಗೆ ಪುಷ್ಕಳವಾದ ಊಟ ಹಾಕಿ. ಇಲ್ಲಿಗೆ ನನ್ನ ನಿಮ್ಮ ಸಂಬಂಧವೂ ಮುಗಿಯಿತು. ಇನ್ನು ಮುಂದೆ ಕಾಡಿಗೆ ಹೋಗಿ ಹಾಯಾಗಿ ಇದ್ದುಬಿಡುತ್ತೇನೆ.'

ಅವರು ನೋಡುತ್ತಿದ್ದಂತೆಯೇ ಐಲುಂಗ್ ತನ್ನ ಡಾಪೋಗಳನ್ನೇ ದಂತಗಳನ್ನಾಗಿ ಮಾಡಿಕೊಂಡು ಆನೆಯ ರೂಪವನ್ನು ತಾಳಿದನು. ಆನೆಗಳ ಮೂಲಪುರುಷನೆಂಬ ಖ್ಯಾತಿ ಪಡೆದು ಕಾಡಿಗೆ ಹೊರಟು ಹೋದನು. ಅವನ ತಂದೆ ತಾಯಿಗಳು ಭೂತವನ್ನೂ ಅದರ ಮಕ್ಕಳನ್ನೂ ತುಂಬಾ ಔದಾರ್ಯದಿಂದ ಕಂಡು ಆದರಿಸಿದ ಕಾರಣ, ಇಂದಿಗೂ ದೇವತೆಗಳು ಭೂಮಿಯಲ್ಲಿ ಸುಖವಾಗಿ ಬಾಳುತ್ತಿದ್ದಾರೆ; ಎಂದಿನವರೆಗೆ ಮಾನವರು ತಮ್ಮನ್ನು ನೆನೆಯುತ್ತಾರೆಯೋ ಅಂದಿನವರೆಗೂ ಅವರು ಕರುಣಾಶಾಲಿಗಳಾಗಿರುತ್ತಾರೆ.

# ನಾಯಿ ಮತ್ತು ಹಂದಿ

ಒಬ್ಬಾನೊಬ್ಬನ ಬಳಿ ಒಂದು ನಾಯಿಯೂ ಒಂದು ಹಂದಿಯೂ ಇದ್ದವು. ಎರಡೂ ಹೊಟ್ಟೆಬಾಕ ಪ್ರಾಣಿಗಳು, ಯಾವ ಕೆಲಸಕ್ಕೂ ಯೋಗ್ಯವಲ್ಲದ ಸೋಮಾರಿಗಳು. ಸ್ವಲ್ಪ ಕಾಲದ ತರುವಾಯ ಅವುಗಳ ಮಾಲೀಕನು ಹೀಗೆಯೇ ಬಿಡುವುದು ಸರಿಯಲ್ಲ, ಇವು ತಮ್ಮ ಅನ್ನವನ್ನಾದರೂ ತಾವು ದುಡಿದು ಪಡೆಯುವಂತೆ ಮಾಡಬೇಕೆಂದು ನಿರ್ಧರಿಸಿ, 'ನೀವಿಬ್ಬರೂ ನನ್ನ ಜಮೀನಿಗೆ ಹೋಗಿ ಅಲ್ಲಿ ನೆಲವನ್ನು ಉಳಬೇಕು' ಎಂದು ಹೇಳಿದನು.

ಹಂದಿ ಹಗಲೆಲ್ಲಾ ದುಡಿಯಿತು; ತನ್ನ ಕೋರೆದಾಡೆಗಳಿಂದ ಮಣ್ಣನ್ನು ಕೆರೆದು ಇಡೀ ಜಮೀನಿನ ವಿಸ್ತಾರವನ್ನು ಅಗೆದು ಹಾಕಿತು. ಆದರೆ ನಾಯಿ ಮರದ ನೆರಳಿನಲ್ಲಿ ಹಾಯಾಗಿ ಮಲಗಿ ನಿದ್ದೆ ಮಾಡಿತು.

ಸಂಜೆಯಾಯಿತು. ಹಂದಿ ಮನೆಗೆ ಬಂತು. ಅದು ಆ ಕಡೆ ಹೋದ ಕೂಡಲೆ ನಾಯಿ ಆ ಜಮೀನಿನ ಮೇಲೆಲ್ಲಾ ಸುತ್ತಾಡಿ ಹಂದಿಯ ಹೆಜ್ಜೆ ಗುರುತುಗಳನ್ನು ಅಳಿಸಿ ತನ್ನವನ್ನು ಅಲ್ಲಿ ಬಿಟ್ಟು, ತಾನೂ ಮನೆಗೆ ಬಂತು.

ಆ ಸಂಜೆ ಅವನು, 'ನೀವು ಏನು ಕೆಲಸ ಮಾಡಿದಿರಿ?' ಎಂದು ಹಂದಿಯನ್ನೂ ನಾಯಿಯನ್ನೂ ಕೇಳಿದನು. ಹಂದಿ ಹೇಳಿತು, 'ನಾನು ಇಡೀ ಜಮೀನನ್ನು ಉತ್ತೆನು; ನಾಯಿ ಹಗಲೆಲ್ಲ ಮರದಡಿಯಲ್ಲಿ ನಿದ್ದೆ ಮಾಡಿತು.' ನಾಯಿ ಹೇಳಿತು, 'ಗದ್ದೆಯನ್ನು ಉತ್ತವನು ನಾನು; ಹಂದಿ ನೆಲವನ್ನು ತನಗೆ ಬೇಕಾದ ಕಂದಮೂಲಗಳಿಗಾಗಿ ಕೆದಕಿತು ಅಷ್ಟೆ.'

ಅವನು ಹೇಳಿದನು, 'ನಾನು ಇಬ್ಬರನ್ನೂ ನಂಬುವುದಿಲ್ಲ. ನಾಳೆ ನಾನೇ ಖುದ್ದಾಗಿ ಅಲ್ಲಿಗೆ ಬಂದು ನೋಡುತ್ತೇನೆ.'

ಮರುದಿನ ಅವನು ತನ್ನ ಗದ್ದೆಗೆ ಹೋಗಿ, ಅಲ್ಲಿ ಎಲ್ಲೆಲ್ಲೂ ನಾಯಿಯ ಹೆಜ್ಜೆಗುರುತಿರುವುದನ್ನೇ ಕಂಡನು. ಹಂದಿ ಮಾಡಿದ ಕೆಲಸದ ಸುಳಿವೇ ಇರಲಿಲ್ಲ. ಮನೆಗೆ ಬಂದವನು ಹಂದಿಯನ್ನು ಕರೆಸಿಕೊಂಡು, 'ನೀನು ಯಾವ ಕೆಲಸವನ್ನೂ ಮಾಡಿಯೇ ಇಲ್ಲ' ಎಂದು ಬೈದನು.

ಅಂದಿನಿಂದಲೂ ಹಂದಿ ಮನೆಯ ಹೊರಗೇ ವಾಸಮಾಡುತ್ತಿದೆ; ಅದರ ಮುಂದೆ ಆಹಾರವನ್ನು ಹಿಡಿದು ಅದನ್ನು 'ಮೋ-ಮೋ' ಎಂದು ಕರೆಯುತ್ತಾರೆ. ಇದರ ಅರ್ಥ: 'ಇಲ್ಲ, ಇಲ್ಲ, ನೀನು ಕೆಲಸ ಮಾಡಿಲ್ಲ.'

ನಾಯಿಯಾದರೋ ಮನೆಯೊಳಗೆ ಬಾಳುತ್ತದೆ; ಅದನ್ನು 'ಕೋ-ಕೋ' ಎಂದು ಕರೆಯುತ್ತಾರೆ. ಇದರ ಅರ್ಥ: 'ಹೌದು, ಹೌದು, ನಿನ್ನ ಕೆಲಸವನ್ನು ನೀನು ಮಾಡಿದೆ.'

# ಸರ್ಪ–ಪತಿ

ಬಲು ಹಿಂದೆ ಒಬ್ಬಳು ಮುದುಕಿ ಇದ್ದಳು; ಅವಳಿಗೆ ಇಬ್ಬರು ಹೆಣ್ಣುಮಕ್ಕಳು. ಅಕ್ಕ ಬಲು ಚೆಲುವೆ; ಅವಳಿಗೆ ನೆಯ್ಗೆ ಸರಿಯಾಗಿ ಬಾರದ ಕಾರಣ ಯಾರೂ ಅವಳನ್ನು ಅಷ್ಟಾಗಿ ಗಮನಿಸುತ್ತಿರಲಿಲ್ಲ. ತಂಗಿ ಬಗೆ ಬಗೆಯಾದ ಚಿತ್ರ–ವಸ್ತ್ರಗಳನ್ನು ನೇಯುತ್ತಿದ್ದಳು. ಅಕ್ಕನಿಗೆ ಸಾದಾ ಬಟ್ಟೆಗಳನ್ನು ನೇಯುವುದು ಮಾತ್ರ ಬರುತ್ತಿತ್ತು; ಇವಳಿಗೆ ಬರುವುದಿಷ್ಟೇ ಎಂದು ಇತರರು ಹಾಸ್ಯ ಮಾಡುತ್ತಿದ್ದರು.

ಒಂದು ಸಲ, ಅವಳಿಗೆ ಇದರಿಂದ ತುಂಬಾ ಸಂಕಟವಾಯಿತು. ಅನ್ನ ನೀರು ಬೇಡವಾಯಿತು. ಸಂಜೆಗೆ ಸ್ನಾನಕ್ಕೆಂದು ಹೊಳೆಗೆ ಹೋದಳು. ಅವಳು ಮಿಾಯುತ್ತಿರುವಾಗ ಒಂದು ದೊಡ್ಡ ಸರ್ಪ ನೀರ ಮೇಲೆ ಹೆಡೆ ಎತ್ತಿತು. ಹೆದರಿ, ಅವಳು ಓಡಹತ್ತಿದಳು. ಆದರೆ ಸರ್ಪ ಅವಳ ಸೌಂದರ್ಯವನ್ನು ಕಂಡು ಬೆರಗಾಗಿ, ತಾನೂ ಒಬ್ಬ ಸುಂದರ ಯುವಕನ ರೂಪವನ್ನು ಧರಿಸಿ ಅವಳನ್ನು ಕೇಳಿತು, 'ನಿನಗೆ ಹೆದರಿಗೆ ಏಕೆ?'

ಹುಡುಗಿ ಉತ್ತರ ಕೊಟ್ಟಳು, 'ನೀನೊಂದು ಸರ್ಪವೆಂದು ಭಾವಿಸಿದ್ದೆ.' ಆ ಯುವಕ ಹೇಳಿದನು, 'ಇಲ್ಲ, ನಾನು ನಿಜವಾಗಿಯೂ ಸರ್ಪವಲ್ಲ. ನೀರ ಕೆಳಗೆ ನನ್ನ ಮನೆ. ನನ್ನಿಷ್ಟದಂತೆ ಸರ್ಪರೂಪವನ್ನಾಗಲಿ ಮಾನವ ರೂಪವನ್ನಾಗಲಿ ಧರಿಸಬಲ್ಲೆ.'

ಅವನ ಸೌಂದರ್ಯದ ಸೆಳವಿಗೆ ಸಿಕ್ಕಿದ ಆ ಹುಡುಗಿ ಅವನ ಬಳಿಗೆ ಬಂದಳು; ಅವನಲ್ಲಿ ಅನುರಕ್ತಳಾದಳು; ಅದಾದ ಮೇಲೆ ಪ್ರತಿ ಸಂಜೆಯೂ ಅವಳು ಊಟ ಮುಗಿದ ಮೇಲೆ ಗುಟ್ಟಾಗಿ ಹೊಳೆಯ ತಡಿಗೆ ಹೋಗಿ ತನ್ನ ಪ್ರಿಯನನ್ನು ಸೇರುತ್ತಿದ್ದಳು.

ಬೆಳಗಾದ ಕೂಡಲೆ ಆ ಯುವಕನು ಮತ್ತೆ ಸರ್ಪ ರೂಪವನ್ನು ತಾಳಿ ನೀರ ಕೆಳಗಿರುವ ತನ್ನ ಮನೆಗೆ ಹೋಗುತ್ತಿದ್ದನು.

ಒಂದು ಸಂಜೆ ಅವರು ಎಂದಿನಂತೆ ಅಲ್ಲಿ ಸೇರಿದರು; ಹುಡುಗಿ ಮಾತಾಡಲು ನಿರಾಕರಿಸಿದಳು. ಏಕೆಂದರೆ ಅವಳ ಹೃದಯದಲ್ಲಿ ತನಗೆ ನೆಯ್ಗೆ ಚೆನ್ನಾಗಿ ಬಾರದೆನ್ನುವ ದುಃಖ ಕುದಿಯುತ್ತಿತ್ತು. ಕಾರಣವೇನೆಂದು ಅವನು ತುಂಬಾ ಒತ್ತಾಯಪಡಿಸಿ ಕೇಳಿದ ಮೇಲೆ; ಅವಳು ಇದ್ದ ಸಂಗತಿಯನ್ನು ತಿಳಿಸಿದಳು. 'ಇದಕ್ಕಾಗಿ ಕೊರಗಬೇಡ. ನಾಳೆ ಬೆಳಗಾಗ ನಾನು ನನ್ನ ಆಕರ್ಷಕವಾದ ಪೊರೆಯನ್ನು ಧರಿಸಿ ಬರುತ್ತೇನೆ, ನನ್ನನ್ನು ನಿನ್ನ ಮನೆಗೆ ಕರೆದುಕೊಂಡು ಹೋಗು. ಮಗ್ಗದ ಮುಂದೆ ಕುಳಿತಾಗ, ನನ್ನನ್ನು ತೊಡೆಯ ಮೇಲಿಟ್ಟುಕೊಂಡು ನನ್ನ ಮೈಮೇಲಿನ ನಮೂನೆಗಳನ್ನು ಅನುಕರಿಸು' ಎಂದು ಅವನು ಅಭಯ ನೀಡಿದನು.

ಯುವಕ ಮತ್ತೆ ಸರ್ಪವಾಗಿ ನೀರನ್ನು ಹೊಕ್ಕನು. ಹುಡುಗಿ ರಾತ್ರಿಯೆಲ್ಲಾ ಹೊಳೆಯ ದಡದ ಮೇಲೆ ಕುಳಿತಿದ್ದಳು. ಉದಯದ ಹೊತ್ತಿಗೆ ಅವನು ತನ್ನ ಆಕರ್ಷಕವಾದ ಪೊರೆಯನ್ನು ಹೊದ್ದು ಸರ್ಪವಾಗಿ ಹಿಂದಿರುಗಿದನು. ಇವಳು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ, ತೊಡೆಯ ಮೇಲೆ ಇಟ್ಟುಕೊಂಡು ಮಗ್ಗದ ಮುಂದೆ ಕುಳಿತು ಕೆಲಸಕ್ಕೆ



ತೊಡಗಿದಳು. ಇದನ್ನು ನೋಡಬಂದ ನೆರೆಯ ಹುಡುಗಿಯರು ಸರ್ಪವನ್ನು ಕಂಡು ಭಯಪಟ್ಟು ಓಡಿದರು. ಸ್ವಲ್ಪ ಹೊತ್ತಿನಲ್ಲೇ ಅವಳು ಇಡೀ ಗ್ರಾಮದಲ್ಲೇ ಅತ್ಯುತ್ಕೃಷ್ಟವಾದ ಸುಂದರ ವಸ್ತ್ರಗಳನ್ನು ನೇಯುತ್ತಿದ್ದಳು.

ಸಂಜೆಯಾಗುತ್ತಲೇ ಅವಳು ಸರ್ಪವನ್ನು ಹೊಳೆಯ ತಡಿಗೆ ಒಯ್ದಳು. ಅದು ಮತ್ತೆ ಮಾನವ ರೂಪಕ್ಕೆ ತಿರುಗಿತು. ಕೆಲವೇ ದಿನಗಳಲ್ಲಿ ಅವಳು ಸುಂದರವಾದ ಮೂರು ಬಟ್ಟೆಗಳನ್ನು ನೇಯ್ದಳು. ಉಳಿದವರೂ ಅಂಥವನ್ನು ನೇಯಲೆಂದು ಮಾದರಿಗಾಗಿ ಒಂದನ್ನು

ತಂಗಿಗೂ, ಇನ್ನೊಂದನ್ನು ನೆರೆಯ ಹುಡುಗಿಯರಿಗೂ ಕೊಟ್ಟು, ಒಂದನ್ನು ತನ್ನ ಬಳಕೆಗೆ ಇಟ್ಟುಕೊಂಡಳು.

ಸ್ವಲ್ಪ ಕಾಲದ ಮೇಲೆ ಸರ್ಪ ಅವಳಿಗೆ ಹೇಳಿತು, 'ನಾವಿಬ್ಬರೂ ಹೀಗೆಯೇ ಕಾಲ ಹಾಕುವುದು ಸರಿಯಲ್ಲ. ನಿನ್ನನ್ನು ಮದುವೆಯಾಗಿ ನನ್ನ ಮನೆಗೆ ಕರೆದುಕೊಂಡು ಹೋಗುವುದೇ ಸೂಕ್ತವೆಂದು ತಿಳಿದಿದ್ದೇನೆ.'

'ನೀರಿನ ಕೆಳಗೆ ನಾನು ಬದುಕುವುದು ಹೇಗೆ?' ಎಂದಳವಳು.

'ಅದು ಕಷ್ಟವಾಗದು. ಇಂಪಾದ ವಾದ್ಯಮೇಳದೊಂದಿಗೆ ನನ್ನ ನೆಂಟರಿಷ್ಟರ ದೊಡ್ಡ ಗುಂಪಿನೊಂದಿಗೆ ನಾನು ನಿನ್ನ ಬಳಿಗೆ ಬರುತ್ತೇನೆ. ನೀನು ಯೋಚಿಸಬೇಕಾಗಿಲ್ಲ. ನೀರಿನ ಕೆಳಗೂ ಬದುಕುವುದು ನಿನಗೆ ಸಾಧ್ಯವಾಗುತ್ತದೆ 'ಎಂದಿತು ಸರ್ಪ.

ಮಾರನೆಯ ಬೆಳಗಾಗ ಹುಡುಗಿ ತನ್ನ ತಾಯಿಗೆ ಹೇಳಿದಳು, 'ನಾನು ನನ್ನ ಗಂಡನ ಬಳಿಗೆ ಹೋಗುತ್ತೇನೆ.'

'ನಿನ್ನ ಗಂಡ ಯಾರೆ?' ಎಂದಳು ತಾಯಿ

'ನನ್ನ ಸರ್ಪ–ಪತಿ, ನನಗೆ ನೆಯ್ಗೆಯನ್ನು ಕಲಿಸಿದವನು' ಎಂದಳವಳು.

'ಅದು ಹೇಗೆ ಸಾಧ್ಯವೆ? ಅವನು ನಿನ್ನನ್ನು ಕೊಲ್ಲುತ್ತಾನೆ.'

ಒಂದು ಸಲ ಬೈಯುವುದು, ಒಂದು ಸಲ ಬೇಡವೆಂದು ಪುಸಲಾಯಿಸುವುದು – ಹೀಗೆ ತಾಯಿ ಏನು ಮಾಡಿದರೂ, ಅವಳು ಕಿವಿಗೊಡಲಿಲ್ಲ.

ಎರಡು ದಿನಗಳಾದ ಮೇಲೆ ದೊಡ್ಡ ಉತ್ಸವದೊಂದಿಗೆ, ವಾದ್ಯಮೇಳ ಸಮೇತವಾಗಿ ಅವನು ಇವಳ ಮನೆಗೆ ಬಂದನು. ಆ ಹಳ್ಳಿಯ ಜನರ ಕಣ್ಣಿಗೆ ಅವರು ಸರ್ಪಗಳಾಗಿ ಕಾಣಿಸುತ್ತಿದ್ದರು; ವಧುವಿನ ಕಣ್ಣಿಗೆ ಮಾತ್ರ ಮಾನವರಾಗಿ ಕಂಡುಬಂದರು. ಗಂಡನ ಮನೆಗೆ ಹೊರಡುವ ಸಮಯದಲ್ಲಿ, ಮಗಳು ತಾಯಿಗೆ ಹೇಳಿದಳು: 'ಹೋಗಿ ಬರುತ್ತೇನೆ. ನಿನಗೆ ಕಷ್ಟ ಬಂದಾಗ ಹೊಳೆಯ ದಡಕ್ಕೆ ಬಂದು ನನ್ನನ್ನು ಕೂಗು.' ಹುಡುಗಿ ಹೊಳೆಯನ್ನು ಹೊಕ್ಕಳು; ನೀರಿನ ತಳದಲ್ಲಿ ಒಂದು ಬಂಗಾರದ ಅರಮನೆ ಇತ್ತು. ಅಲ್ಲಿ ಇಬ್ಬರೂ ಸುಖವಾಗಿದ್ದರು; ಮಕ್ಕಳು ಮರಿ ಆದವು.

ಮುಂದೆ ಇನ್ನೊಂದು ದಿನ ಅವಳ ತಂಗಿಯೂ ಅಂದುಕೊಂಡಳು, 'ನಾನೂ ಏಕೆ ಒಂದು ಸರ್ಪವನ್ನು ಮದುವೆಯಾಗಬಾರದು?' ತಾನೂ ಹೊಳೆಯ ಬಳಿಗೆ ಹೋದಳು; ಅಲ್ಲೊಂದು ಬಿಲವನ್ನು ಹುಡುಕಿದಳು. ಅದರೊಳಗೊಂದು ಕೃಷ್ಣಸರ್ಪವಿತ್ತು. ಅದೂ ಒಬ್ಬ ಸುಂದರ ಯುವಕನ ರೂಪವನ್ನು ತಾಳಿ ತನ್ನನ್ನು ಮದುವೆಯಾದೀತೆಂಬ ಭರವಸೆಯಿಂದ, ಆ ಬಿಲದ ಪಕ್ಕದಲ್ಲಿ ಮಲಗಿದಳು. ಅದು ಹೊರಗೆ ಬಂತು; ಅದು ಕೇವಲ ಸರ್ಪವಾಗಿತ್ತು; ಅವಳನ್ನು ಕಚ್ಚಿ ಸಾಯಿಸಿತು

ತಾಯಿಗೆ ದಿಕ್ಕಿಲ್ಲದೆ ಹೋಯಿತು; ಜೊತೆಗೆ, ತುಂಬಾ ಮುದುಕಿಯೂ ಆಗಿದ್ದಳು. ತಡವರಿಸಿಕೊಂಡು ನಡೆಯುತ್ತಿದ್ದಳು. ಮನೆಯಲ್ಲಿ ತಿನ್ನಲು ಏನೂ ಇರಲಿಲ್ಲ. ಹಾಗೆಯೇ ಒಂದು ದಿನ ಅವಳು ಅಳುತ್ತಾ ಹೊಳೆಯ ಬಳಿಗೆ ಹೋಗಿ, 'ಮಗಳೇ, ಮಗಳೇ' ಎಂದು ಕೂಗಿದಳು. ಕತ್ತಲೆಯಾಯಿತು; ಮಗಳು ನೀರನ್ನು ದಾಟಿ ತಾಯ ಬಳಿಗೆ ಬಂದು,

'ನನ್ನೊಂದಿಗೆ ಬಾ' ಎಂದಳು. ತಾಯಿ ಒಪ್ಪಲಿಲ್ಲ; ಮಗಳು ಅವಳ ಮುಖಕ್ಕೆ ಬಟ್ಟೆಕಟ್ಟಿ ಎಳೆದುಕೊಂಡು ಹೋದಳು. ಮುದುಕಿ ಆ ಬಂಗಾರದ ಅರಮನೆಯನ್ನೂ, 'ಅಜ್ಜಿ' ಎನ್ನುತ್ತ ತನ್ನನ್ನು ಕರೆಯುವ ಮಕ್ಕಳ ಹಿಂಡನ್ನೂ ಕಂಡಳು; ಮೊಮ್ಮಕ್ಕಳು ಅಜ್ಜಿಯ ಸೀರೆಯ ಸೆರಗನ್ನು ಹಿಡಿದು ಆಡಿ, ತೊಡೆಯ ಮೇಲೆ ಹತ್ತಿದವು. ತತ್‌ಕ್ಷಣವೇ ಸರ್ಪಗಳಾಗಿ ಅವಳ ಮೈಗೆ ಹೆಣೆದುಕೊಂಡವು. ಅವಳಿಗೆ ತುಂಬಾ ಭಯವಾಯಿತು; ಅವುಗಳನ್ನು ಕಿತ್ತೆಸೆದಳು. ಅವು ಮತ್ತೆ ಮಾನವ ರೂಪವನ್ನು ತಾಳಿದವು.

ಇದಾದ ಮೇಲೆ ಮುದುಕಿ ಮಗಳಿಗೆ ಹೇಳಿದಳು, 'ನನ್ನನ್ನು ಮನೆಗೆ ಕಳುಹಿಸು, ಇಲ್ಲಿ ಬದುಕುವುದು ನನ್ನಿಂದ ಸಾಧ್ಯವಿಲ್ಲ.'

ಅವಳ ಅಳಿಯ ಹೇಳಿದನು, 'ಆಗಬಹುದು. ಉಡುಗೊರೆಯಾಗಿ ಒಂದು ವಸ್ತುವನ್ನು ನಿನಗೆ ಕೊಡುತ್ತೇನೆ.'

ಒಂದು ಬಟ್ಟೆಯ ಚೂರಿನಲ್ಲಿ ಒಂದಿಷ್ಟು ಮರಳನ್ನೂ, ಇನ್ನೊಂದರಲ್ಲಿ ಒಂದಿಷ್ಟು ಧಾನ್ಯವನ್ನೂ ಹಾಕಿ, ತನ್ನ ಕಿರುಬೆರಳುದ್ದದ ಒಂದು ಚೂರು ಮರವನ್ನೂ ಒಂದು ಹಗ್ಗದ ಚೂರನ್ನೂ ಸೇರಿಸಿ ಗಂಟುಕಟ್ಟಿ ಮುದುಕಿಯ ಕೈಗೆ ಹಾಕಿ, 'ನಿನ್ನ ಮನೆಗೆ ಹೋಗುವ ತನಕ ನೀನು ಇದರ ಕಡೆಗೆ ನೋಡಬೇಡ; ಮನೆಗೆ ಹೋಗಿ ಇವುಗಳಲ್ಲಿರುವ ಪದಾರ್ಥಗಳನ್ನು ಬೇರೆ ಬೇರೆ ದೊಡ್ಡ ಬುಟ್ಟಿಗಳಲ್ಲಿ ಹಾಕು. ಒಂದು ವಾರ ಕಳೆದ ಮೇಲೆ, ಬುಟ್ಟಿಗಳ ಮುಚ್ಚಳನ್ನುತೆರೆದು ಒಳಗೇನಿದೆ ನೋಡು' ಎಂದನು. ಆಮೇಲೆ ಅವನು ಅವಳನ್ನು ನೀರಾಚೆಗೆ ತಂದುಬಿಟ್ಟನು.

ಹೊಳೆಯ ದಡದ ಮೇಲೆ ನಿಂತಿದ್ದ ಮುದುಕಿ, 'ನಾನು ಮಗಳ ಮನೆಗೆ ಹೋಗಿದ್ದೆನಷ್ಟೆ. ಅವರು ನನಗೆ ಕೊಟ್ಟ ಉಡುಗೊರೆಯಾದರೂ ಏನು? ಹಣವಲ್ಲ; ಈ ದರಿದ್ರ ವಸ್ತುಗಳು' ಎಂದುಕೊಂಡಳು. ಅವಳಿಗೆ ತುಂಬಾ ಸಿಟ್ಟು ಬಂತು. ಅವರು ಕೊಟ್ಟಿದ್ದ ಗಂಟನ್ನು ನೆಲಕ್ಕೆ ಎಸೆದಳು. ಆಮೇಲೆ ಅವಳಿಗೆ ಏನು ಹೊಳೆಯಿತೋ, 'ನನ್ನ ಅಳಿಯ ಹೇಳಿದ್ದಂತೆ ಮಾಡುತ್ತೇನೆ' ಎಂದುಕೊಂಡು, ಆ ಗಂಟನ್ನು ಎತ್ತಿಕೊಂಡು ಮನೆಗೆ ಬಂದು ಬೇರೆ ಬೇರೆ ಚಿಕ್ಕ ಬುಟ್ಟಿಗಳಲ್ಲಿ ಅವುಗಳನ್ನು ಹಾಕಿ ಮುಚ್ಚಿಟ್ಟಳು. ವಾರ ಕಳೆದ ಮೇಲೆ ಅವಳು ಬುಟ್ಟಿಗಳ ಮುಚ್ಚಳವನ್ನು ತೆರೆದು ನೋಡಿದಳು. ಮರದ ಚೂರು ಒಣಗಿದ ಮೀನಾಗಿತ್ತು; ಹಗ್ಗ ಒಣಗಿದ ಮಾಂಸವಾಗಿತ್ತು; ಮರಳು ಅಕ್ಕಿಯಾಗಿತ್ತು; ಧಾನ್ಯ ಬೀಜದ ಭತ್ತವಾಗಿತ್ತು. ತನ್ನ ಅಳಿಯ ಕೊಟ್ಟಿದ್ದರಲ್ಲಿ ಹೆಚ್ಚು ಪಾಲನ್ನು ಅವಳು ದಾರಿಯಲ್ಲೇ ಎಸೆದು ಬಂದಿದ್ದರಿಂದಲೂ, ಅವಳಿಗೆ ಲಭಿಸಿದ್ದು ಸ್ವಲ್ಪವೇ. ಹಾಗಿದ್ದರೂ ಅವಳಿಗೆ ಈಗ ಇಷ್ಟಾದರೂ ಆಹಾರ ಲಭಿಸಿತ್ತು. ಅವಳು ಬದುಕಿರುವ ತನಕ ಅವಳಿಗೆ ಅದೇ ಜೀವನಾಧಾರವಾಗಿತ್ತು.

# ಚಮರೀ ಮೃಗ

ಭೂತಾನ ಗಡಿಗೆ ಅನತಿ ದೂರದಲ್ಲಿರುವ ಈಶಾನ್ಯಗಡಿ ಪ್ರದೇಶದ ಪಶ್ಚಿಮ ಭಾಗದಲ್ಲಿರುವ ಷೆರ್‌ಡುಕ್‌ಪೆನ್ನರಲ್ಲಿ ಒಂದು ಮನಮೋಹಕವಾದ ನೃತ್ಯ ರೂಢಿಯಲ್ಲಿದೆ. ಅದು ಉತ್ತರಕ್ಕಿರುವ ಉನ್ನತ ಪರ್ವತ ಪ್ರದೇಶಗಳಿಗೆ ತುಂಬಾ ಉಪಕಾರಿಯಾಗಿರುವ ಚಮರೀ ಮೃಗದ ಮೂಲವನ್ನು ವರ್ಣಿಸುತ್ತದೆ.

ಅಪಾಪೆಕ್ ಎಂಬ ಮುದುಕನೂ, ಅವನ ಹೆಂಡತಿ ಜಮ್ಮುವೂ ತಿಬೆಟ್ಟಿನಲ್ಲಿ ವಾಸಿಸುತ್ತಿದ್ದರು ಅವರಿಗೆ – ಗಪ್ಪಸಂಬ್ರು, ತೆಪಗಲು ಮತ್ತು ಡಗ್ಯೆಸಂಬ್ರು ಎಂಬ ಮೂವರು ಮಕ್ಕಳಿದ್ದರು. ತುಂಬಾ ಶ್ರೀಮಂತರಾಗಿದ್ದ ಆ ವೃದ್ಧ ದಂಪತಿಗಳು ತಮ್ಮ ಆಸ್ತಿಯನ್ನು ಗಪ್ಪಸಂಬ್ರುವಿಗೂ ಡಗ್ಯೆಸಂಬ್ರುವಿಗೂ ಹಂಚಿದರು; ತೆಪಗಲುವಿಗೆ ಏನನ್ನೂ ಕೊಡಲಿಲ್ಲ. ಅವನು ಅವರ ಬಳಿಗೆ ಹೋಗಿ ತನ್ನ ಭಾಗವನ್ನು ಕೇಳಿದನು; ಅವರು ಏನನ್ನೂ ಕೊಡುವುದಿಲ್ಲವೆಂದರು.

ಇದರಿಂದ ಖಿನ್ನನಾದ ತೆಪಗಲು, 'ನನಗೆ ಆಸ್ತಿಯಲ್ಲಿ ಭಾಗವಿಲ್ಲ; ತಿನ್ನಲು ಏನೂ ಇಲ್ಲ; ಇವರೊಂದಿಗೆ ಇರುವುದರಿಂದ ಏನು ಪ್ರಯೋಜನ? ನನಗೆ ಅನ್ನ ಸಿಕ್ಕುವ ಇನ್ನೆಲ್ಲಿಗಾದರೂ ನಾನು ಹೋಗಿಬಿಡುವುದೇ ಕ್ಷೇಮ' ಎಂದುಕೊಂಡನು. ಮನೆಯನ್ನು ತೊರೆದು ಮಹಾದೇವನ ಬಳಿಗೆ ಹೋಗಿ ತನ್ನ ಕಥೆಯನ್ನು ಹೇಳಿಕೊಂಡನು. 'ನನ್ನ ತಾಯಿ ತಂದೆಗಳ ಆಸ್ತಿಯಲ್ಲಿ ನನಗೆ ಎಂದಾದರೂ ಪಾಲು ಸಿಕ್ಕುತ್ತದೆಯೆ? ಹೇಳು' ಎಂದು ಕೇಳಿದನು.

ಮಹಾದೇವ ನುಡಿದನು, 'ಅದು ನಿನಗೆ ಎಂದಿಗೂ ಸಿಕ್ಕದು.' ಅವನು ಭೂತಗಳ ಬಳಿಗೆ ಹೋಗಿ, 'ನನ್ನ ತಾಯಿತಂದೆಗಳ ಆಸ್ತಿಯಲ್ಲಿ ನನಗೆ ಎಂದಾದರೂ ಪಾಲು ಸಿಕ್ಕುತ್ತದೆಯೆ? ಹೇಳಿ?' ಎಂದನು.

ಅವೂ ಹಾಗೆಯೇ ಹೇಳಿದವು. 'ಅದು ನಿನಗೆ ಎಂದಿಗೂ ಸಿಕ್ಕದು.' ಆಮೇಲೆ ಅವನು ಗಾಳಿಯನ್ನು ಕೇಳಿದನು, 'ನನ್ನ ತಾಯಿತಂದೆಗಳ ಆಸ್ತಿಯಲ್ಲಿ ಎಂದಾದರೂ ಪಾಲು ಸಿಕ್ಕುತ್ತದೆಯೆ? ಹೇಳು' ಎಂದನು.

ಗಾಳಿಯ ಉತ್ತರವೂ ಅದೇ, 'ಅದು ನಿನಗೆ ಎಂದಿಗೂ ಸಿಕ್ಕದು.' ಕಡೆಗೆ ಹತಾಶನಾದ ತೆಪಗಲು ಕಾಡಿಗೆ ಹೋದನು. ಮರಗಳ ನಡುವೆ ತೂರಿಕೊಂಡು ಹೋಗಿ ಬೆಟ್ಟದ ಪಕ್ಕದಲ್ಲಿದ್ದ ಒಂದು ದೊಡ್ಡ ಗುಹೆಯ ಬಳಿಗೆ ಬಂದನು. ಅದರ ಎರಡೂ ಪಕ್ಕಗಳಲ್ಲೂ ತೊರೆಗಳು ಹರಿದು ಬರುತ್ತಿದ್ದವು; ಅವುಗಳ ನಡುವೆ ತೇವವಿಲ್ಲದ ದಾರಿಯೊಂದಿತ್ತು.

ಈ ಹುಡುಗ ಗುಹೆಯನ್ನು ಹೊಕ್ಕನು; ಕಗ್ಗತ್ತಲಾಗಿದ್ದರೂ ಒಳನುಗ್ಗಿ ಬಲುದೂರ ಸಾಗಿದನು ಒಳಗೆ ಮೂರು ದೊಡ್ಡ ಮೊಟ್ಟೆಗಳ ಮೇಲೆ ಜಾಟುಂಗ್–ಟುಂಗ್–ಕರ್ಮು ಎಂಬ ಹೆಸರಿನ ಒಂದು ದೆವ್ವದಂಥ ಹಕ್ಕಿ ಕಾವು ಕೂತಿತ್ತು. ಅವನು ಅದಕ್ಕೆ ವಂದನೆ ಸಲ್ಲಿಸಿ, 'ಇಂಥಾ ಸ್ಥಳದಲ್ಲಿದ್ದುಕೊಂಡು ನೀನು ಏನನ್ನು ತಿನ್ನುವೆ' ಎಂದನು.

'ನಾನು ಅಕ್ಕಿಯನ್ನು ತಿನ್ನುತ್ತೇನೆ' ಎಂದಿತು ಹಕ್ಕಿ.

'ನಾನು ಅನ್ನವನ್ನು ಕಂಡು ಎಷ್ಟೋ ದಿನಗಳಾದವು; ಉಪವಾಸ ಮಾಡಿ ದುರ್ಬಲನಾಗಿದ್ದೇನೆ. ನನಗೊಂದಿಷ್ಟು ಅಕ್ಕಿಯನ್ನು ಕೊಡುವೆಯ' ಎಂದು ಅವನು ಕೇಳಿದನು.

ಹಕ್ಕಿ ಉತ್ತರಿಸಿತು, 'ನನಗೇ ಅಕ್ಕಿ ಇಲ್ಲ. ನಾನು ಸಾಮಾನ್ಯವಾಗಿ ಸಂಚಾರ ಹೋದಾಗ ಅದನ್ನು ತರುತ್ತೇನೆ. ಆದರೆ ನಿನಗೆ ಸ್ವಲ್ಪವನ್ನು ತಂದುಕೊಡಬಲ್ಲೆ. ಈಗ ಮೊಟ್ಟೆಗಳ ಮೇಲೆ ಕಾವು ಕೂತಿದ್ದೇನೆ; ನಾನು ಎದ್ದು ಹೋದರೆ ಅವು ತಣ್ಣಗಾಗಿ ಕೆಟ್ಟು ಹೋಗುತ್ತವೆ. ಈ ತೊಂದರೆಗೇನು ಮಾಡಲಿ?'

ಹುಡುಗ ಹೇಳಿದನು, 'ನೀನು ಹೋಗಿ ಅಕ್ಕಿಯನ್ನು ತೆಗೆದುಕೊಂಡು ಬಾ. ನಾನು ನಿನ್ನ ಮೊಟ್ಟೆಗಳನ್ನು ಬೆಚ್ಚಗಿಟ್ಟಿರುತ್ತೇನೆ.'

ಹಕ್ಕಿ ಒಪ್ಪಿತು; ಆದರೆ ಹೇಳಿತು, 'ನೀನು ಏನಾದರೂ ಮಾಡು; ಆದರೆ, ಈ ಮೊಟ್ಟೆಗಳನ್ನು ಮಾತ್ರ ತಲೆಕೆಳಗು ಮಾಡಬೇಡ.'

ತಾನು ಮೊಟ್ಟೆಗಳನ್ನು ಮುಟ್ಟುವುದಿಲ್ಲವೆಂದೂ, ಆದರೆ ಅವುಗಳ ಮೇಲೆ ತನ್ನ ಕೈಗಳನ್ನು ತಗುಲದಂತೆ ಇಟ್ಟುಕೊಂಡು ಬೆಚ್ಚಗೆ ಮಾಡುತ್ತೇನೆಂದೂ ಅವನು ಮಾತು ಕೊಟ್ಟನು. ಹಕ್ಕಿ ಹಾರಿಹೋಯಿತು; ಹುಡುಗ ತನ್ನ ಕೈಗಳನ್ನು ಮೇಲೆ ಹಿಡಿದು ಮೊಟ್ಟೆಗಳನ್ನು ಬೆಚ್ಚಗಿಟ್ಟಿದ್ದನು.

ಸ್ವಲ್ಪ ಹೊತ್ತಾದ ಮೇಲೆ ಕಿರುಚಪಲತೆಯಿಂದ ಅವನು ಮೊಟ್ಟೆಗಳನ್ನು ಪರೀಕ್ಷಿಸಲೆಂದು ಎತ್ತಿನೋಡಿ ಪುನಃ ತಲೆಕೆಳಗಾಗಿ ಇಟ್ಟನು.

ಅಷ್ಟು ಹೊತ್ತಿಗೆ ಹಕ್ಕಿ ಅಕ್ಕಿಯನ್ನು ಸಂಪಾದಿಸಿಕೊಂಡು ಹಿಂದಿರುಗಿತು; ಅದನ್ನು ತೆಪಗಲುವಿಗೆ ಕೊಟ್ಟಿತು. ಆದರೆ ತನ್ನ ಮೊಟ್ಟೆಗಳು ತಲೆಕೆಳಗಾಗಿರುವುದನ್ನು ಕಂಡು ತುಂಬಾ ಕೋಪಗೊಂಡು ಕೂಡಲೆ ಹಾರಿಹೋಯಿತು.

ಹಕ್ಕಿ ಹಾರಿ ಹೋದ ಮೇಲೆ ಆ ಹುಡುಗ ತನ್ನ ತಪ್ಪಿಗೆ ಅತ್ತನು. ಅವನಿಗೆ ದಿಕ್ಕೇ ತೋಚಲಿಲ್ಲ. ಆದರೆ ದೇವರು ದಯಾಮಯನೆಂಬುದನ್ನು ಸ್ಮರಿಸಿ ಈ ಮೊಟ್ಟೆಗಳಿಂದ ಏನಾದರೂ ಒಡೆದು ಬರುವಂತೆ ಮಾಡಿಯಾನೆಂದು ಧೈರ್ಯದಿಂದಿದ್ದನು. ಆ ಮೊಟ್ಟೆಗಳಲ್ಲಿ ಒಂದನ್ನು ಹಿಡಿದೆತ್ತಿ ಮಹಾದೇವನನ್ನು ಪ್ರಾರ್ಥಿಸಿದನು, 'ದುಃಖಪಡುತ್ತಿರುವ ನನ್ನ ಮೇಲೆ ಕನಿಕರವಿರಲಿ! ಈ ಮೊಟ್ಟೆಯಿಂದ ಏನಾದರು ಹುಟ್ಟಿ ಬಂದು ನನಗೆ ನೆರವಾಗುವಂತೆ ಮಾಡು.' ತನ್ನ ಕೈಯಲ್ಲಿದ್ದ ಕಡ್ಡಿಯಿಂದ ಮೊಟ್ಟೆಯನ್ನು ಒಡೆದನು; ಒಂದು ಬಿಳಿಯ ಚಮರೀ ಮೃಗ ಅದರಿಂದ ಹೊರಬಿದ್ದು ವಾಯುಮಂಡಲವನ್ನು ತೂರಿ ಹಾರಿ ಮಹಾದೇವನನ್ನು ಸೇರಿತು. ಹುಡುಗ ಎರಡನೆಯ ಮೊಟ್ಟೆಯನ್ನು ಒಡೆದನು; ಒಂದು ಕೆಂಪು ಚಮರೀ ಮೃಗ ಅದರಿಂದ ಹೊರಬಿದ್ದು ಕಾಡಿನ ಭೂತಗಳೆಡೆಗೆ ಹಾರಿಹೋಯಿತು. ಹುಡುಗ ಅತ್ತನು; 'ಉಳಿದಿರುವುದು ಇನ್ನೊಂದೇ ಮೊಟ್ಟೆ; ಇದೊಂದನ್ನಾದರೂ ನನ್ನ ಪ್ರಯೋಜನಕ್ಕಾಗಿ ಉಳಿಸು' ಎಂದು ಮೊರೆಯಿಟ್ಟನು.

ಆ ಮೂರನೆಯ ಮೊಟ್ಟೆಯನ್ನು ಒಡೆದಾಗ ಒಂದು ಕಪ್ಪು ಚಮರೀ ಮೃಗ ಅದರಿಂದ ಹೊರಬಿದ್ದು ನೀರಿನಲ್ಲಿ ಮುಳುಗಿತು. ಹುಡುಗ ಗುಹೆಯಿಂದ ಈಚೆಗೆ ಬಂದನು; ಕೈಯಲ್ಲೊಂದು ಹಗ್ಗವನ್ನು ಹಿಡಿದುಕೊಂಡು ಇಡೀ ಒಂದು ವರುಷ ಹೊಳೆಯ ಅಂಚಿನಲ್ಲಿ



ಕಾದು ಕುಳಿತನು. ಅದು ಅಷ್ಟು ಕಾಲವೂ ನೀರಿನೊಳಗೇ ಇತ್ತು. ವರುಷದ ಕೊನೆಯಲ್ಲಿ ಆ ಕಪ್ಪು ಚಮರೀ ಮೃಗ ನೀರಿನ ಮೇಲೆ ತಲೆಯೆತ್ತಿತು. ತೆಪಗಲು ಹಗ್ಗವೆಸೆದು ಅದನ್ನು ಹಿಡಿದನು; ಮನೆಗೆ ಕರೆದುಕೊಂಡು ಹೋಗಿ ತನ್ನ ಬಳಿಯಲ್ಲೇ ಇಟ್ಟುಕೊಂಡನು. ಸ್ವಲ್ಪಕಾಲದ ಮೇಲೆ ಅದು ಕರು ಹಾಕಿತು; ಹುಡುಗನಿಗೆ ಹಾಲು ತುಪ್ಪ ಸಿಕ್ಕಿದವು. ಮೂರು ವರುಷಗಳಲ್ಲಿ ಅದು ಮೂರು ಕರುಗಳನ್ನು ಹಾಕಿತು.

ಇದು ಅಪಾಪೆಕಿಗೂ ತಿಳಿದುಹೋಯಿತು. ಅವನು ತನ್ನ ಉಳಿದಿಬ್ಬರು ಮಕ್ಕಳೊಂದಿಗೆ ಅಲ್ಲಿಗೆ ಬಂದನು. ಎಲ್ಲರೂ ಕಲೆತು ಬಾಳಿದರು. ತಮಗೆ ಆಹಾರವನ್ನೊದಗಿಸಿದ ಪ್ರಾಣಿಯ ಗೌರವಾರ್ಥವಾಗಿ ನರ್ತಿಸಿದರು.

# ಪ್ರಥಮ ಮಿಥುನ

ಮಿಥುನ ಕಾಡುಕೋಣದಂತಿರುವ ಭವ್ಯವಾದ ಪ್ರಾಣಿ; ಭಾರತದ ಈಶಾನ್ಯ ಗಡಿಯ ಆದಿವಾಸಿಗಳು ಇದನ್ನು ಪ್ರೀತಿಯಿಂದ ಸಾಕುತ್ತಾರೆ. ಇದು ಅವರ ಸಂಪತ್ತಿನ ತಳಹದಿ; ವ್ಯಾಪಾರ ವ್ಯವಹಾರಗಳಲ್ಲಿ ಚಲಾಯಿಸುವ ನಾಣ್ಯ; ದಂಡ ತೆರುವಾಗಲೂ, ಕನ್ಯಾಶುಲ್ಕ ವನ್ನು ನೀಡುವಾಗಲೂ, ಮತ್ತು ಎಲ್ಲಾ ಮುಖ್ಯ ಉತ್ಸವಗಳಲ್ಲಿ ಬಲಿಕೊಡುವಾಗಲೂ ಇದನ್ನು ಬಳಸುತ್ತಾರೆ. ಅನೇಕರು ಹೇಳುವ ಈ ಕಥೆ ಪ್ರಥಮ ಮಿಥುನ ಜನ್ಮವೆತ್ತಿದುದು ಹೇಗೆಂಬುದನ್ನೂ ಮತ್ತು ರೋಗ ನಿವಾರಣೆಗಾಗಿ ಅದನ್ನು ಬಲಿಕೊಡಲಾಯಿತೆಂಬುದನ್ನೂ ವರ್ಣಿಸುತ್ತದೆ.

ಪ್ರಥಮ ಮಾನವನಾದ ಬುಸ್ಲೊ ಆವ್ಹೊವಿಗೆ ಮೂವರು ಗಂಡು ಮಕ್ಕಳೂ, ಮೂವರು ಹೆಣ್ಣು ಮಕ್ಕಳೂ ಇದ್ದರು. ಹುಡುಗರ ಹೆಸರು ಸಿಜ್ಜಿ – ಜಾವ್ಹೊ, ಮಚ್ಲೋ – ಜಾವ್ಹೊ, ಚಲೋ –ಜಿಜಾವ್ಹೊ ಎಂದು; ಹುಡುಗಿಯರ ಹೆಸರು ಫಿಬಿ–ಚಿಸಿ, ಮಚ್ಲೊ–ಚಿಸಿ, ಚಲೊ–ಮಿಚಿಸಿ ಎಂದು

ಆಗ ಪ್ರಪಂಚದಲ್ಲಿ, ಇವರನ್ನು ಬಿಟ್ಟರೆ, ಬೇರೆ ಜನವೇ ಇರಲಿಲ್ಲ. ಈ ಕಾರಣದಿಂದ ಅವನ ಮಕ್ಕಳು ಮೈತುಂಬಿ ಬೆಳೆದಾಗ ಒಂದು ಸಮಸ್ಯೆ ಹುಟ್ಟಿತು. ಮದುವೆಯಾಗ ಬಯಸಿದ ಗಂಡುಮಕ್ಕಳಿಗೆ ಹೆಣ್ಣುಗಳು ಸಿಕ್ಕಲಿಲ್ಲ ಹೆಣ್ಣು ಮಕ್ಕಳಿಗೆ ಗಂಡುಗಳು ಸಿಕ್ಕಲಿಲ್ಲ ಕಡೆಗೆ ತಂದೆ ಅವರು ತಮ್ಮತಮ್ಮಲ್ಲೇ ಮದುವೆ ಮಾಡಿಕೊಳ್ಳಲೆಂದು ತೀರ್ಮಾನಿಸಿದನು ಅದರಂತೆ ಸಿಜ್ಜಿ–ಜಾವ್ಹೋ ತಂಗಿ ಫಿಬಿ–ಚಿಸಿಯನ್ನೂ, ಮಚ್ಲೊ–ಜಾವ್ಹೊ ತಂಗಿ ಮಚ್ಲೊ–ಚಿಸಿಯನ್ನೂ ಮದುವೆಯಾಗಿ ನಾಲ್ವರೂ ಒಂದೇ ಮನೆಯಲ್ಲಿ ಸುಖವಾಗಿ ಬಾಳುತ್ತಿದ್ದರು ಆದರೆ ಚಲೋ–ಜಿಜಾವ್ಹೊವನ್ನು ಮದುವೆಯಾದ ಚಲೊ–ಮಿಚಿಸಿಗೆ ತನ್ನ ಗಂಡನೊಂದಿಗೆ ಸುಖವಾಗಿರುವುದು ಸಾಧ್ಯವಾಗಲಿಲ್ಲ. ಏಕೆಂದರೆ 'ಸ್ವಂತ ಅಣ್ಣನನ್ನೇ ಗಂಡನೆಂದು ಭಾವಿಸಿ ಅವನೊಂದಿಗೆ ಹೇಗೆ ಬಾಳಲಿ?' ಎಂದಳು ಗಂಡನ ಹತ್ತಿರಕ್ಕೆ ಹೋಗುತ್ತಲೂ ಇರಲಿಲ್ಲ; ಅವನು ಹೇಳಿದ ಕೆಲಸವನ್ನು ಮಾಡುತ್ತಲೂ ಇರಲಿಲ್ಲ. ಇವರ ದಿನದಿನದ ಕಾದಾಟ ಕಚ್ಚಾಟಗಳಲ್ಲಿ ಒಂದು ವರುಷ ಉರುಳಿ ಹೋಯಿತು. ಮನೆಯವರೆಲ್ಲರೂ ಅವನಿಗೆ ಹೇಳಿದರು, 'ನಿನ್ನ ಹೆಂಡತಿ ಪ್ರಯೋಜನವಿಲ್ಲ. ಅವಳು ನಿನ್ನನ್ನು ಪ್ರೀತಿಸುವುದಿಲ್ಲ; ಹೇಳಿದ ಕೆಲಸವನ್ನು ಮಾಡುವುದಿಲ್ಲ.' ಚಲೋ–ಜಿಜಾವ್ಹೋ ಇದನ್ನು ಹಲವು ಕಾಲ ಸಹಿಸಿ ಕೊಂಡಿದ್ದನು ಒಂದು ದಿನ ಅವಳನ್ನು ಹೊಡೆದನು; ಅವಳು ಅವಮಾನದಿಂದಲೂ ದುಃಖದಿಂದಲೂ ಮನೆಯ ಮೂಲೆಯಲ್ಲಿ ಮುದುರಿಕೊಂಡಳು

ಎಲ್ಲರೂ ಹೊಲಗಳ ಕಡೆಗೆ ಹೋದ ಮೇಲೆ ಅವಳು ಎದ್ದು ತನ್ನ ಬುಟ್ಟಿಯಲ್ಲಿ ಬಿದಿರಿನ ಅಂಡೆಗಳನ್ನೂ ಸೋರೆಬುರುಡೆಗಳನ್ನೂ ಹಾಕಿಕೊಂಡು ನೀರನ್ನು ತರಲು ಹೊಳೆಗೆ ಹೋದಳು ಹೊಳೆಯ ಹತ್ತಿರಕ್ಕೆ ಬಂದಾಗ ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು,

ಸೋರೆಬುರುಡೆಗಳನ್ನು ಅದರ ಎರಡೂ ಕಡೆಗೆ ಕೊಂಬುಗಳಂತೆ ಇರಿಸಿಕೊಂಡಳು; ಅಕ್ಕಿಯ ಸಾರಾಯಿಯನ್ನು ಸೋದಿಸುವ ಜರಡಿಯನ್ನು ಬಾಲದಂತೆ ಬಿಗಿದುಕೊಂಡು, ಬಿದಿರು ಕೊಳವೆಗಳನ್ನು ತನ್ನ ಕೈಗಳಿಗೂ ಕಾಲುಗಳಿಗೂ ಕಟ್ಟಿಕೊಂಡಳು. ತಾನು ಉಟ್ಟಿದ್ದ ಬಟ್ಟೆಗಳನ್ನು ಅಗಿದು ನುಂಗಿದಳು; ಹೀಗೆ ಮಾಡಿದ್ದರಿಂದ ಅವಳ ಎರಡೂ ಪಕ್ಕೆಗಳು ಉಬ್ಬಿದವು. ಈ ರೀತಿಯಲ್ಲಿ ಅವಳು ಮಿಥುನದ ರೂಪಕ್ಕೆ ತಿರುಗಿದಳು; ಕಾಡಿನಲ್ಲಿ ಅಲೆದಾಡುತ್ತಾ ವಾಸಮಾಡುತ್ತಿದ್ದಳು.

ಸಂಜೆಯಾಗುತ್ತಲೆ ಉಳಿದವರು ಹೊಲಗಳಿಂದ ಮನೆಗೆ ಹಿಂದಿರುಗಿದರು; ಮನೆಯಲ್ಲಿ ಅವಳಿಲ್ಲದಿರುವುದನ್ನು ಅರಿತರು. ಅಲ್ಲೇ ಅವಿತುಕೊಂಡಿರಬಹುದೆಂದೂ, ಇಲ್ಲವೆ ಜಗಳವಾಡಿ ಮುನಿಸಿಕೊಂಡಿರಬಹುದೆಂದೂ ಭಾವಿಸಿ ಅವಳನ್ನು ಹುಡಕಲು ಯಾರೂ ಹೊರಡಲಿಲ್ಲ.

ಅವಳ ಸುದ್ದಿಯೇ ತಿಳಿಯದೆ ಎರಡು ದಿನ ಕಳೆಯಿತು. ಚಲೋ–ಜಿಜಾವೊ ಆತಂಕಗೊಂಡು ಅವಳನ್ನು ಹುಡುಕಲು ಹೊರಟನು. ಅವನು ಆಚೆಗೆ ಕಾಲಿಡುವ ಹೊತ್ತಿಗೆ ಸರಿಯಾಗಿ ಒಂದು ಜೀರುದುಂಬಿ ಬಳಿಗೆ ಬಂದು, ಅವಳೊಂದು ಮಿಥುನವಾದಳೆಂದೂ, ಹೊಳೆಯ ಸಮೀಪದ ಕಾಡಿನಲ್ಲಿರುವಳೆಂದೂ ನುಡಿಯಿತು. ಚಲೋ–ಜೀಜಾವೊ ಅಲ್ಲಿಗೆ ಧಾವಿಸಿದನು; ನೋಡುತ್ತಾನೆ, ಅಲ್ಲಿ ಚಲೋ–ಮಿಚಿಸಿ ಮಿಥುನ ರೂಪದಲ್ಲಿದ್ದಳು. ಅವನ ಕಣ್ಣುಗಳಲ್ಲಿ ನೀರು ಉಕ್ಕಿಹರಿಯಿತು. ಅವಳನ್ನು ಹಿಡಿದುಕೊಂಡು ಮನೆಗೆ ಕರೆತಂದನು. ಮನೆಯಲ್ಲಿದ್ದ ಎಲ್ಲರನ್ನೂ ಕರೆದು ನಡೆದ ಸಂಗತಿಯನ್ನು ತಿಳಿಸಿದನು. ಎಲ್ಲರಿಗೂ ಪರಮಾಶ್ಚರ್ಯವಾಯಿತು. ಬಸ್ಲು–ಅವೊ ಹೇಳಿದನು, 'ನನ್ನ ಮಗಳನ್ನು ನಾವು ಕಾಡಿನಲ್ಲಿ ಅಲೆಯ ಬಿಡಬಾರದು. ಅವಳಿಗೆ ತಕ್ಕ ಏರ್ಪಾಟನ್ನು ಮಾಡಬೇಕು. ಅವಳನ್ನು ಮನೆಯ ಬಳಿಯಲ್ಲೇ ಕಟ್ಟಿಹಾಕೋಣ.' ಅವನು ಬೆತ್ತದಿಂದ ಒಂದು ಭದ್ರವಾದ ಹಗ್ಗವನ್ನು ಹೊಸೆದು ಒಂದು ಕಂಬಕ್ಕೆ ಕಟ್ಟಿಹಾಕಿದನು. ಅವಳಿಗೆ ಮೇವನ್ನೂ ನೀರನ್ನೂ ಕೊಟ್ಟರು; ಅವಳು ಒಂದನ್ನೂ ಮುಟ್ಟಲಿಲ್ಲ. ಅಳುತ್ತಾ ಅಲ್ಲೇ ನಿಂತಿದ್ದಳು.

ಮಿಥುನ ಮುಖದ ಮೇಲೆ ಇಳಿಯುತ್ತಿರುವ ಕಂಬನಿಗಳನ್ನು ಕಂಡು, ಬಸ್ಲು–ಅವೋ ಹೇಳಿದನು, 'ನೀನು ನನ್ನ ಮಗಳು – ಅಷ್ಟೇ ಅಲ್ಲದೆ, ಮಗಳೂ, ಸೊಸೆಯೂ ಆಗಿದ್ದೀಯೆ. ಮಹಾದೇವ ನಿನ್ನನ್ನು ಮಿಥುನ ರೂಪಕ್ಕೆ ತಿರುಗಿಸಿದ್ದಾನೆ. ನಾವೇನು ಮಾಡಬಲ್ಲೆವು? ನೀನು ಹೀಗೆ ಮಾಡಬಾರದು, ನಮ್ಮ ಹಾಗೆಯೇ ನೀನೂ ಊಟಮಾಡಬೇಕು.'

ಮಿಥುನ–ರೂಪದ ಮಗಳು ಹೇಳಿದಳು, 'ಮಹಾದೇವ ನನ್ನನ್ನು ಈ ರೂಪಕ್ಕೆ ತಿರುಗಿಸಿರುವುದು ನಿಜ; ನನಗೆ ಹೀಗಿರುವುದೇ ಸುಖವಾಗಿದೆ. ಆದರೆ ನಾನು ಒಬ್ಬಳು ಹೆಣ್ಣು; ಗಂಡನಿಲ್ಲದೆ ಬದುಕಲಾರೆ. ನನಗೆ ತಕ್ಕವನನ್ನು ಹೋಗಿ ಹುಡಕುತ್ತೇನೆ. ನನ್ನನ್ನು ಬಿಟ್ಟುಬಿಡು.'

ಈ ಮಾತನ್ನು ಕೇಳಿದ ತಂದೆ ಮಗಳನ್ನು ಕಳಿಸಿಕೊಟ್ಟನು. ಅವಳು ತನಗೆ ತಕ್ಕ ಗಂಡನನ್ನು ಹುಡುಕುತ್ತಾ ಅಲೆಯುತ್ತಿದ್ದಳು. ಗಂಡ ಸಿಕ್ಕುವುದು ಅಷ್ಟು ಸುಲಭವಾಗಲಿಲ್ಲ.

ಮೊತ್ತಮೊದಲಿಗೆ ದೂರದಲ್ಲಿ ಒಂದು ನಾಯಿ ಬರುತ್ತಿರುವುದನ್ನು ಕಂಡಳು; 'ಇವನನ್ನು ಮದುವೆಯಾಗಬಹುದು ನಾನು – ನನಗೆ ಸಾಕು' ಎಂದುಕೊಂಡಳು. ಅದರ ಹತ್ತಿರಕ್ಕೆ ಹೋದಾಗ ಅದು ಸಣ್ಣ ಪ್ರಾಣಿಯೆಂದೂ, ತನಗೆ ವರಸಾಮ್ಯವಾಗದೆಂದೂ ನಿರ್ಧರಿಸಿದಳು.

ನಾಯಿಯನ್ನು ಬಿಟ್ಟು ಮುಂದೆ ಹೋದಳು; ಒಂದು ಹಂದಿ ಸಿಕ್ಕಿತು ಈ ಪ್ರಾಣಿ ಆಗಬಹುದೆಂದುಕೊಂಡಳು. ಹತ್ತಿರಕ್ಕೆ ಹೋದಾಗ 'ಇವನದೂ ನನ್ನದೂ ಒಂದೇ ಬಣ್ಣವಾದರೂ, ಇವನೂ ಸಣ್ಣ ಪ್ರಾಣಿಯೇ' ಎಂದು ಆ ಯೋಚನೆಯನ್ನು ಕೈಬಿಟ್ಟಳು

ಇನ್ನೂ ಮುಂದೆ ಒಂದು ಕುದುರೆ ಸಿಕ್ಕಿತು. ತನಗೆ ಅನುರೂಪನಾದ ಗಂಡ ಸಿಕ್ಕಿದನೆಂದು ಅವಳಿಗೆ ತುಂಬಾ ಸಂತೋಷವಾಯಿತು. ಹತ್ತಿರಕ್ಕೆ ಹೋದಾಗ ಅದರ ಕಾಲುಗಳೂ, ಬಾಲವೂ, ಮುಖವೂ ಬೇರೆ ರೀತಿಯಲ್ಲಿರುವುದನ್ನು ಕಂಡು 'ಇವನೂ ನನಗೆ ತಕ್ಕವನಲ್ಲ' ಎಂದುಕೊಂಡಳು

ಕುದುರೆಯನ್ನೂ ಬಿಟ್ಟು ಮುಂದೆ ಮುಂದೆ ನಡೆಯುತ್ತಿರುವಾಗ ಒಂದು ದೊಡ್ಡ ಜಿಂಕೆ ಕಣ್ಣಿಗೆ ಬಿತ್ತು. ಮೊದಲ ನೋಟಕ್ಕೆ 'ಇವನು ನನಗೆ ಒಪ್ಪುವ ಗಂಡ' ಎಂದು ಅವಳಿಗೆ ತೋರಿದರೂ ಹತ್ತಿರಕ್ಕೆ ಹೋದಾಗ 'ಇವನ ಜಾತಿಯೇ ಬೇರೆ' ಎನ್ನಿಸಿತು; ಕೊಂಬುಗಳು ಬಲು ಉದ್ದವಾಗಿದ್ದುದೂ ಒಂದು ಕಾರಣ ಇದೇ ರೀತಿಯಲ್ಲಿ ಅವಳು ಕರಡಿ, ಹುಲಿ, ಕಪಿ,



ಮುಂತಾದ ಎಲ್ಲಾ ವನ್ಯಮೃಗಗಳನ್ನೂ ನೋಡುತ್ತಾ ಬಂದು, ಇವರಲ್ಲಿ ಯಾರೂ ತನ್ನನ್ನು ಕೈಹಿಡಿಯಲು ತಕ್ಕವರಲ್ಲ. ರೂಪದಲ್ಲಿ ತಕ್ಕ ಮಟ್ಟಿಗಾದರೂ ತನ್ನನ್ನು ಹೋಲುವವರಲ್ಲ ಎಂದು ನಿಶ್ಚೈಸಿದಳು.

ಕಟ್ಟಕಡೆಗೆ ಅವಳೂ ಸೂರ್ಯೋದಯದ ಸೀಮೆಗೆ ಬಂದಳು. ತಣ್ಣೀರಿನ ನದಿಗಳನ್ನೂ ಬಿಸಿನೀರಿನ ನದಿಗಳನ್ನೂ ದಾಟಿದಳು; ಅಲ್ಲಿ ಹೊಳೆಯ ಮರಳಹಾಸಿನಲ್ಲಿ ಒಂದು ಗಂಡು ಮಿಥುನ ನಿಂತಿರುವುದನ್ನು ಕಡೆಗೂ ಕಂಡಳು. ಅವನನ್ನು ದೂರದಿಂದ ನೋಡಿದಾಗಲೇ ಅವಳಿಗೆ ರೋಮಾಂಚನವಾಯಿತು. ಅವಳು ಕೂಗಿ ಕರೆದಾಗ ಅವನು ಓಗೊಟ್ಟನು. ಹತ್ತಿರಕ್ಕೆ ಹೋಗಿ ನೋಡಿದಳು; ಬಣ್ಣ, ಮುಖ, ಕಾಲುಗಳು, ಬಾಲ ಎಲ್ಲವೂ ತನ್ನಂತೆಯೇ ಇದ್ದವು. ತಾನು ಹುಡುಕುತ್ತಿದ್ದ ಗಂಡ ಸಿಕ್ಕಿದನೆಂದು ತಿಳಿದಳು. ಇಬ್ಬರೂ ಪರಸ್ಪರ ಒಲಿದು ಕೂಡಿಕೊಂಡರು ಸಕಾಲದಲ್ಲಿ ಅವಳು ಇಬ್ಬರು ಮಕ್ಕಳನ್ನು ಹೆತ್ತಳು.

ಇತ್ತಕಡೆ ಈ ಮಿಥುನದ ಮಾನವ–ಪತಿ ಚಲೋ–ಜಿಜಾವೊ ರೋಗದಿಂದ ನರಳುತ್ತಿದ್ದನು. ಅವನ ಮನೆಯವರು ಪೂಜಾರಿಯನ್ನು ಕರೆಸಿ, 'ಏನು ಮಾಡಿದರೆ ಇವನ ರೋಗ ವಾಸಿಯಾಗುತ್ತದೆ?' ಎಂದು ಕೇಳಿದರು 'ನೀವು ಒಂದು ಮಿಥುನವನ್ನು ಬಲಿಗೊಟ್ಟರೆ ಮಾತ್ರ ಇವನ ರೋಗ ವಾಸಿಯಾಗುತ್ತದೆ' ಎಂದು ಅವನು ಹೇಳಿ ಬಿಟ್ಟನು.

'ಆದರೆ ನಾವು ಮಿಥುನವನ್ನು ಎಲ್ಲಿಂದ ತರೋಣ?' ಎಂದು ಅವರು ಕೇಳಿದರು. ಪೂಜಾರಿ ಹೇಳಿದನು, 'ಮಿಥುನಗಳಿವೆ; ಆದರೆ ಅವು ಇರುವ ಸ್ಥಳ ಇಲ್ಲಿಗೆ ಬಲು ದೂರದಲ್ಲಿ, ಶೀತನದಿ ಉಷ್ಣನದಿಗಳಾಚೆಗಿದೆ.' ಅವನ ಮಾತಿನಂತೆ, ಸೋದರರಾದ ಸಿಜ್ಜಿ–ಜಾವೊ ಮತ್ತು ಮಚ್ಲೊ–ಜಾವೊ ಮಿಥುನಗಳನ್ನು ಹುಡುಕ ಹೊರಟರು. ಅವರು ಸೂರ್ಯೋದಯದ ಸೀಮೆಗೆ ಬಂದರು. ಶೀತನದಿಯನ್ನೂ ದಾಟಿದರು. ಆದರೆ ಉಷ್ಣನದಿಯನ್ನು ದಾಟುವುದು ಅವರಿಗೆ ಅಸಾಧ್ಯವಾಯಿತು. ಆದ್ದರಿಂದ ಅವರು ಹೊಳೆಯ ದಡದ ಮೇಲೆ ತಾವಿದ್ದಲ್ಲಿಯೇ ನಿಂತು, ಕೈಯಲ್ಲಿ ಹಸಿರೆಲೆಗಳನ್ನೂ ಉಪ್ಪನ್ನೂ ಹಿಡಿದು ಆಚೆಯ ದಡದ ಮೇಲೆ ದೂರದಲ್ಲಿದ್ದ ಮಿಥುನಗಳನ್ನು ಕೂಗಿ ಕರೆದರು. ಅವು ಉಪ್ಪನ್ನು ಕಂಡಕೂಡಲೇ ಹೊಳೆಯನ್ನು ದಾಟಿ ಬರಲು ಪ್ರಯತ್ನಿಸಿದವು. ಆದರೆ ಹೊಳೆಯ ನೀರು ತುಂಬಾ ಬಿಸಿಯಾಗಿತ್ತು. ಹೊಳೆಗೆ ಬಿದ್ದ ಮಿಥುನಗಳಲ್ಲಿ ಬದುಕಿ ಈಚೆಯ ದಡಕ್ಕೆ ಬಂದವೆಂದರೆ ಮೂರೇ! – ಮಿಥುನ ರೂಪದಲ್ಲಿದ್ದ ಚಾಲೊ–ಮಿಚಿಸಿ ಮತ್ತು ಅವಳ ಎರಡು ಕರುಗಳು ಮಾತ್ರ. ಸೋದರರು ಅವುಗಳನ್ನು ಹೊಡೆದುಕೊಂಡು ಬಂದು ಮನೆಯ ಮುಂದೆ ಕಟ್ಟಿಹಾಕಿದರು.

ಬಸ್ಲೊ–ಆವೋವಿನ ಹೆಂಡತಿ ಹೊರಗೆ ಬಂದು ಅವುಗಳನ್ನು ನೋಡಿ ಅದು ತನ್ನ ಮಗಳೆಂಬುದನ್ನು ಮನಗಂಡು, 'ಅವಳನ್ನು ಬಲಿಗೊಡುವುದು ನಮಗೆ ಸಾಧ್ಯವಾಗದು' ಎಂದಳು.

ಆದರೆ ಬಸ್ಲೊ–ಆವೊ ಹೇಳಿದನು, 'ಒಂದು ಕಾಲದಲ್ಲಿ ಅವಳು ನಮ್ಮ ಮಗಳಾಗಿದ್ದುದೇನೋ ನಿಜವೇ. ಈಗ ಅವಳನ್ನು ದೇವತೆಗಳು ಬಯಸಿದ್ದಾರೆ. ನಾವು ಅವಳನ್ನು ಬಲಿಕೊಡಬೇಕಾಗಿ ಬಂದಿದೆ!'

ಎಲ್ಲ ಅಲ್ಲಿಗೇ ಬಂತು. ಅವಳನ್ನು ಕಟ್ಟಿಹಾಕಿ ಕೊಲ್ಲತೊಡಗಿದರು; ಅವರ ಕೊಡಲಿಗಳಿಗೆ ಅವಳ ಕುತ್ತಿಗೆಯ ಚರ್ಮವನ್ನೂ ಹರಿಯಲಾಗಲಿಲ್ಲ. ಆಗ ಬಸ್ಲು–ಆವ್ರೋವಿನ ಹೆಂಡತಿ ನುಡಿದಳು, 'ನಾನು ಮೊದಲೇ ಹೇಳಿದೆ, ಅವಳು ನಮ್ಮ ಮಗಳು. ಈಗ ತನ್ನ ಪ್ರಾಣವನ್ನು ಅರ್ಪಿಸುವುದು ಅವಳ ಕರ್ತವ್ಯವೆಂದು ನಾವು ಅವಳಿಗೆ ತಿಳಿಸಿದಲ್ಲದೆ, ಅವಳನ್ನು ಕೊಲ್ಲುವುದು ನಮಗೆ ಸಾಧ್ಯವಾಗದು.'

ಮುದುಕಿ ತನ್ನ ಮಿಥುನ–ಪುತ್ರಿಯ ಬಳಿಗೆ ಹೋಗಿ ಕಿವಿಯಲ್ಲಿ ಹೇಳಿದಳು, 'ನೀನು ಒಂದು ಕಾಲದಲ್ಲಿ ಮಾನವಳಾಗಿದ್ದೆ; ನಿನ್ನನ್ನು ಬಲಿಗೊಡುವುದು ಆಗ ಸಾಧ್ಯವಾಗತ್ತಿರಲಿಲ್ಲ. ಈಗ ನೀನೊಂದು ಮಿಥುನ; ನಿನ್ನ ಪ್ರಾಣಾರ್ಪಣೆಗೆ ಇದು ಸಕಾಲವಾಗಿದೆ.'

ಅನಂತರ ಮುದುಕಿ ಪಕ್ಕಕ್ಕೆ ಸರಿದಳು; ಉಳಿದವರು ಮಿಥುನವನ್ನು ತಮ್ಮ ಕೈ–ಕೊಡಲಿಗಳಿಂದ ಕೊಂದರು.

# ಮಾಯಾಪ್ರಪಂಚದಲ್ಲಿ ನಡೆದ ಸಾಹಸ ಕಾರ್ಯಗಳು

## ಅತಿಥಿಗಳನ್ನು ಸತ್ಕರಿಸಿದ ಪಕ್ಷಿಗಳು

ಒಬ್ಬ ರಾಜಕುಮಾರನಿಗೂ ಕಮ್ಮಾರರ ಹುಡುಗ ಅಗೇರಿಯನಿಗೂ ತುಂಬಾ ಸ್ನೇಹ ಬೆಳೆಯಿತು ಆದರೆ ಇಬ್ಬರೂ ಯಾವಾಗಲೂ ತಂಟೆಮಾಡುತ್ತಿದ್ದುದರಿಂದ, ರಾಜ ಅವರನ್ನು ಕಾಡಿಗೆ ಓಡಿಸಿದನು. ವಿಶಾಲ ವೃಕ್ಷಗಳ ನಡುವೆ ಸಾಗುವ ಕಾಲುದಾರಿಯೊಂದನ್ನು ಹಿಡಿದು ಇವರು ಹೋಗುತ್ತಿರುವಾಗ ಅಲ್ಲಿ ಕೆಲವು ಗುಬ್ಬಿಗಳು ಏನನ್ನೋ ತಿನ್ನುತ್ತಿರುವುದು ಇವರ ಕಣ್ಣಿಗೆ ಬಿತ್ತು. ಅವುಗಳನ್ನು ಕೇಳಿದರು, 'ನಮಗೂ ಒಂದಿಷ್ಟು ಆಹಾರಬೇಕು. ಅದೆಲ್ಲಿ ಸಿಕ್ಕುತ್ತದೆ?'

'ನೀವು ಅವೋನ್ರಾಪುರ ಪಟ್ಟಣದ ಪೇಟೆಗೆ ಹೋಗಬೇಕು' ಎಂದವು ಗುಬ್ಬಿಗಳು; 'ನಿಮಗೆ ಇಲ್ಲಿ ತಿನ್ನಲು ಏನೂ ಸಿಕ್ಕದು.'

ಸರಿ, ಈ ಹುಡುಗರು ರಾತ್ರಿಯಾಗುವ ತನಕ ನಡೆದರು; ಅನಂತರ ಒಂದು ಹತ್ತಿಯ ಮರದ ಕೆಳಗೆ ಮಲಗಿದರು; ಒಬ್ಬ ಹುಡುಗನಿಗೆ ನಿದ್ದೆ ಬಂತು ಇನ್ನೊಬ್ಬ ಬೆಂಕಿ ಆರದಂತೆ ನೋಡಿಕೊಳ್ಳಲು ಎಚ್ಚರವಾಗಿಯೇ ಇದ್ದನು.

ಆ ಮರದ ಮೇಲೆ ಚಕ್ಕ, ಚಕ್ಕಿ ಎಂಬ ಎರಡು ಹಕ್ಕಿಗಳಿದ್ದವು. ಬೀಸುವ ಕಲ್ಲಿನ ಎರಡು ಹೋಳುಗಳಂತೆ ಅವು ಎಡೆಬಿಡದೆ ಒಂದನ್ನೊಂದು ಪ್ರೀತಿಸುತ್ತಿದ್ದವು.

ಚಕ್ಕ ಕೆಳಗೆ ನೋಡಿ ಚಕ್ಕಿಗೆ ಹೇಳಿತು, 'ಇವರಿಗೆ ಉಣಬಡಿಸಲು ನಮ್ಮ ಬಳಿ ಏನೂ ಇಲ್ಲವಲ್ಲ! ಆದ್ದರಿಂದ ನಾವೇ ಬೆಂಕಿಗೆ ಬೀಳೋಣ. ನಮ್ಮನ್ನು ಸುಟ್ಟು ಇವರು ಹೊಟ್ಟೆತುಂಬ ಊಟಮಾಡಲಿ.'

ಮೇಲಿದ್ದ ಎರಡು ಹಕ್ಕಿಗಳೂ ಬೆಂಕಿಗೆ ಬಿದ್ದವು. ಕಾವಲು ಕೂತಿದ್ದ ಅಗೇರಿಯಾ ಹುಡುಗ ಒಂದೊಂದು ಹಕ್ಕಿಯನ್ನೂ ಮೂರಾಗಿ ಹೋಳುಮಾಡಿ ಸುಟ್ಟು, ತಾನು ಮೂರು ಹೋಳುಗಳನ್ನು ತಿಂದು ಉಳಿದ ಮೂರನ್ನು ತನ್ನ ಸ್ನೇಹಿತನಿಗೆಂದು ಇಟ್ಟುಕೊಂಡನು. ರಾಜಕುಮಾರನಿಗೆ ಎಚ್ಚರವಾಯಿತು; ಅವನೂ ತನ್ನ ಪಾಲಿನ ಆಹಾರವನ್ನು ತಿಂದನು. ಅಗೇರಿಯಾ ಹುಡುಗ ಮಲಗಿ ಕಣ್ಣುಮುಚ್ಚಿದನು. ತನ್ನ ಸ್ನೇಹಿತ ಗಾಢನಿದ್ರೆಯಲ್ಲಿ ಮುಳುಗಿರುವುದನ್ನರಿತು, ಆ ರಾಜಕುಮಾರ ಸ್ವಲ್ಪವೂ ಸುಳುವು ಕೊಡದೆ ತನ್ನ ಪಾಡಿಗೆ ತಾನು ಹೊರಟು ಹೋದನು. ಪ್ರಪಂಚ ಪರ್ಯಟನ ಮಾಡಿ, ಕಡೆಗೆ ಭಾಗ್ಯಶಾಲಿಯಾದನು. ಅನಂತರ ತನ್ನ ತಂದೆ ಗತಿಸಿದನೆಂಬ ಸುದ್ದಿಯನ್ನು ಕೇಳಿ, ತನ್ನೂರಿಗೆ ಹಿಂದಿರುಗಿದನು; ಅಲ್ಲಿ ತೆರವಾಗಿದ್ದ ಸಿಂಹಾಸನವನ್ನೇರಿ ರಾಜನಾದನು.

ಅಗೇರಿಯಾ ಹುಡುಗನಿಗೆ ಎಚ್ಚರವಾಯಿತು; ಅವನಿಗೆ ಭಯವೂ ಆಯಿತು. 'ನನ್ನ ಸ್ನೇಹಿತ ಅವೋನ್ರಾಪುರ ಪಟ್ಟಣದ ಪೇಟೆಗೆ ಹೋಗಿರಬಹುದೇನೋ' ಎಂದುಕೊಂಡು, ಅವನು ಏಕಾಕಿಯಾಗಿ ಎಲ್ಲೆಲ್ಲೂ ಹುಡುಕುತ್ತ ಹೋದನು. ಹಲವು ದಿನಗಳ ಮೇಲೆ ಅವನು ಹತಕ ನದೀ ತೀರದಲ್ಲಿ ವಾಸಿಸುತ್ತಿದ್ದ ಹಣ್ಣು ಹಣ್ಣು ಮುದುಕಿಯೊಬ್ಬಳ ಬಳಿಗೆ ಬಂದನು. ಅಲ್ಲೇ ಇರುತ್ತಾ, ಅವಳಿಗೆ ತನ್ನ ಸೇವೆಯನ್ನು ಸಲ್ಲಿಸಿದನು. ಒಂದು ದಿನ ಅವಳು ಕೇಳಿದಳು, 'ನಿನಗೆ ನಾನೇನು ಕೊಡಬಲ್ಲೆ?'

'ನಾನು ಅವೋನ್ರಾಪುರ ಪಟ್ಟಣದ ಪೇಟೆಯನ್ನು ನೋಡಬೇಕು' ಎಂದನವನು.

'ಅದು ತುಂಬಾ ಕಷ್ಟ; ಆದರೂ ಆ ಕಡೆಗಿರುವ ಮಾವಿನ ಮರದಲ್ಲಿ ಒಂದು ಹಣ್ಣನ್ನು ಕಿತ್ತುಕೊಂಡು ಹಿಂತಿರುಗಿ ನೋಡದೆ ಬಂದು ಬಿಡು' ಎಂದಳವಳು.

ಹುಡುಗ ಮಾವಿನ ಹಣ್ಣನ್ನು ಕಿತ್ತನು; ಆದರೆ ಚಪಲಚಿತ್ತದಿಂದ ಹಿಂತಿರುಗಿ ನೋಡಿದನು. ಅವನ ಕೈಯಲ್ಲಿದ್ದ ಹಣ್ಣು ಹಾರಿಹೋಗಿ ಮರವನ್ನು ಸೇರಿತು. ಎರಡನೆಯ ಸಲವೂ ಹಾಗೆಯೇ ಮಾಡಿದನು; ಆಗಲೂ ಹಾಗೆಯೇ ಆಯಿತು. ಅಂತೂ ಕಡೆಯ ಸಲ ಅವನು ಹಣ್ಣನ್ನು ಕಿತ್ತು ಮುದುಕಿಯ ಬಳಿಗೆ ಬಂದನು. ಅವಳು ಪೇಟೆಗೆ ಹೋಗುವ ದಾರಿಯನ್ನು ಅವನಿಗೆ ತೋರಿಸಿದಳು. ಅವನು ಹಾಗೆಯೇ ಹೋಗುತ್ತಿರುವಾಗ, ಆ ಮಾವಿನ ಹಣ್ಣು ಸುಂದರ ತರುಣಿಯೊಬ್ಬಳ ರೂಪವನ್ನು ತಾಳಿತು.

ಅವರು ಅಪರಿಚಿತವೂ ಆಶ್ಚರ್ಯಕರವೂ ಆದ ಒಂದು ಅರಣ್ಯವನ್ನು ದಾಟಿದರು. ಆ ಕಾಡಿನ ಅಂಜೂರದ ಹಣ್ಣುಗಳು ಬೀಸುವ ಕಲ್ಲಿನಷ್ಟು ದೊಡ್ಡವು; ಅವು ಮರಗಳ ನಡುವೆ ಮೇಲಿಂದ ಬಿದ್ದಾಗ ಡಂ ಡಂ ಎಂದು ಒಡೆಯುತ್ತಿದ್ದವು. ಅದರ ಎಲೆಗಳು ಮೇಣದಷ್ಟು ನುಣುಪು. ಮುಂದೆ ಅವರು ದಟ್ಟವಾದ ಒಂದು ಬಿದಿರ ಮೆಳೆಯನ್ನು ಹೊಕ್ಕರು; ಅತ್ತ ಗಾಳಿ ಬೀಸಿದಾಗ ಮುದಿ ಬಿದಿರುಗಳು ಕಬ್ಬಿಣದ ಸಲಾಕಿಗಳಂತೆ ಒಂದಕ್ಕೊಂದು ತಗುಲಿ ಠಣ್ ಠಣ್ ಎನ್ನುತ್ತಿದ್ದವು; ನುಣುಪಾದ ಎಳೆಯ ಬಿದಿರುಗಳು ಒಣಗಿದ ತಂಬಟೆಯ ತೊಗಲಿನಂತೆ ಕಸ್‌ಮಸ್-ಕಸ್‌ಮಸ್ ಎನ್ನುತ್ತಿದ್ದವು. ಕಾರ್ಕೋಟ್ ಎಲೆಗಳು ಒಂದನ್ನೊಂದು ತಿಕ್ಕಿ ಅವುಗಳ ಕೆಳಗೆ ಅವಿತುಕೊಂಡಿರುವ ಮುದಿನರಿಗಳನ್ನು ಬೆದರಿಸಿದವು. ಹುಲಿಗಳು ಹಿಂದಕ್ಕೂ ಮುಂದಕ್ಕೂ ನೆಗೆದವು; ಚಿರತೆಗಳು ನಾಯಿಗಳಂತೆ ಆಡಿದವು. ಹುಲಿಗಳು ಆರ್ಭಟಿಸಿದವು; ಚಿರತೆಗಳು ಗಂಟಲಲ್ಲೇ ಗೊರಗುಟ್ಟಿದವು; ಕಪಿಗಳು ಕಟಗುಟ್ಟಿದವು. ಜಿಂಕೆಗಳು ಗಗನಕ್ಕೆ ನೆಗೆದವು. ಉದ್ದನೆಯ ಕೊಂಬಿನ ಗೌರವೂ, ಮೈನವಿರೆದ್ದ ಕಾಡುಕೋಣಗಳೂ ಓಲಾಡುತ್ತ ನೆಲವನ್ನು ಕುಟ್ಟಿದವು.

ಕೊನೆಗೆ ಅವರು ಬಯಲು ಸೀಮೆಗೆ ಬಂದರು; ಅಲ್ಲಿ ಏಳು ಮಂದಿ ಕಳ್ಳರು ಮೇಲೆ ಬಿದ್ದರು. ಕ್ರೂರಿಗಳಾದ ಆ ಕಡುಪಾತಕಿಗಳು ಹುಡುಗನನ್ನು ಬಾವಿಗೆ ನೂಕಿ ಹುಡುಗಿಯನ್ನು ಎತ್ತಿಕೊಂಡು ಹೋದರು. ಆದರೆ ಅವಳು ಮತ್ತೆ ಮಾವಿನ ಹಣ್ಣಿನ ರೂಪಕ್ಕೆ ತಿರುಗಿದಳು. ಕಳ್ಳರಿಗೆ ಹೆದರಿಕೆಯಾಯಿತು; ಆ ಹಣ್ಣನ್ನು ಅವರು ಮರದ ಕೆಳಗೆ ಎಸೆದುಹೋದರು.

ಸ್ವಲ್ಪ ಕಾಲದ ತರುವಾಯ, ಅದೇ ಸ್ಥಳಕ್ಕೆ ಇತ್ತೀಚೆಗೆ ರಾಜಪದವಿಗೇರಿದ್ದ ಆ ಹುಡುಗನೂ ಬಂದನು. ಬೇಟೆಯಾಡಲು ಬಂದಿದ್ದು, ದಣಿವಾರಿಸಿಕೊಳ್ಳಲು ಒಂದು ಹತ್ತಿಯ ಮರದ ಕೆಳಗೆ

ಮಲಗಿಕೊಂಡನು. ಚಕ್ಕ ಚಕ್ಕಿ ಎಂಬ ಹಕ್ಕಿಗಳು ಹಿಂದೆ ಅದೇ ಮರದ ಮೇಲೆ ವಾಸಿಸುತ್ತಿದ್ದವು; ಅವು ಬಿದ್ದು ಸತ್ತದ್ದೂ ಅದರ ಕೆಳಗೇ. ಈ ನಡುವೆ ಆ ಹಕ್ಕಿಗಳ ಮರಿಗಳು ಬಲಿತು ದೊಡ್ಡವಾಗಿದ್ದವು. ಅವು ಕೊಂಬೆಯ ಮೇಲೆ ಮಾತಾಡಿಕೊಳ್ಳುತ್ತಿದ್ದವು. ಅವುಗಳ ಪೈಕಿ ಹೆಚ್ಚು ವಯಸ್ಸಾಗಿದ್ದ ಒಂದು ಹಕ್ಕಿ ಅಗೇರಿಯಾ ಹುಡುಗನ ಕಥೆಯನ್ನು ತನ್ನ ಹೆಂಡತಿಗೆ ವರ್ಣಿಸುತ್ತಾ, ಕಳ್ಳರು ಆ ಹುಡುಗನನ್ನು ಇಂಥಾ ಸ್ಥಳದಲ್ಲಿರುವ ಇಂಥಾ ಬಾವಿಯಲ್ಲಿ ಹಾಕಿದ್ದಾರೆಂದು ತಿಳಿಸಿತು. ಇದು ಮರದ ಕೆಳಗೆ ಮಲಗಿದ್ದ ರಾಜನ ಕಿವಿಗೆ ಬಿತ್ತು. ಅವನು ಕೂಡಲೆ ಆ ಬಾವಿಯ ಹತ್ತಿರಕ್ಕೆ ಹೋಗಿ ತನ್ನ ಸ್ನೇಹಿತನ ಜೀವವನ್ನು ಉಳಿಸಿದನು. ಇಬ್ಬರೂ ಜತೆಗೂಡಿ ಊರಿಗೆ ಬರುತ್ತಿರುವಾಗ ಮರದ ಕೆಳಗೆ ಮಾವಿನ ಹಣ್ಣು ಬಿದ್ದಿರುವುದನ್ನು ಕಂಡರು; ಅದನ್ನು ಎತ್ತಿಕೊಂಡು ಮುಂದೆ ನಡೆದರು. ದಾರಿಯಲ್ಲಿ ಅದು ಮತ್ತೆ ಸುಂದರ ತರುಣಿಯ ರೂಪವನ್ನು ತಾಳಿತು; ಅವಳ ಶರೀರದಿಂದ ಅವ್ಹೋನ್ರಾಪುರ ಪಟ್ಟಣದ ಪೇಟೆಯೂ ಉದ್ಭವಿಸಿತು. ದೊಡ್ಡ ಷಹರಿನ ಅಂಗಡಿ ಬೀದಿ ಅದು; ಸಮಸ್ತ ಸುಖ ಸಂತೋಷಗಳೂ ಅಲ್ಲಿ ಲಭಿಸುತ್ತಿದ್ದವು. ತೆರೆದ ಅಂಗಡಿಗಳು; ನೋಡಿಕೊಳ್ಳುವವರೇ ಇರಲಿಲ್ಲ; ಯಾರು ಬೇಕಾದರೂ ತಮಗೆ ಬೇಕಾದ್ದನ್ನು ಹಾಗೆಯೇ ತೆಗೆದುಕೊಳ್ಳ ಬಹುದಾಗಿತ್ತು. ದಿನವೂ ಬೆಳಗಾದರೆ ಮಾವಿನಹಣ್ಣು ಮಾಯಾಬಜಾರಾಗುತ್ತಿತ್ತು. ಅಗೇರಿಯಾ ಹುಡುಗ ಅಲ್ಲಿಗೆ ಬಂದು ತನಗೆ ಬೇಕಾದ್ದನ್ನು ತೆಗೆದುಕೊಂಡು ಹೋಗುತ್ತಿದ್ದನು; ಸಂಜೆಯಾದರೆ ಅದು ಸುಂದರ ತರುಣಿಯ ರೂಪವನ್ನು ತಾಳಿ ಅವನ ಪ್ರೀತಿಯ ಮಡದಿಯಾಗಿ ಸುಖಸಂತೋಷಗಳನ್ನು ನೀಡುತ್ತಿತ್ತು.

# ಚಿನ್ನದ ನವಿಲು

ಒಂದೂರಿನಲ್ಲಿ ಒಬ್ಬ ಕುರುಬನಿದ್ದನು. ಅವನಿಗೊಬ್ಬ ಚಿಕ್ಕ ಮಗನಿದ್ದನು. ಇವನ ಮೇಲೆ ಅವನಿಗೆ ತುಂಬಾ ಪ್ರೀತಿ. ಒಂದು ದಿನ ಮಗ ಹೇಳಿದನು, 'ನನಗೊಂದು ಕೊಡಲಿಯನ್ನೂ ಕಂಬಳಿಯನ್ನೂ ಕೊಡು; ನನಗೂ ದುಡಿದು ಸಂಪಾದನೆ ಮಾಡುವ ಆಸೆಯಿದೆ.' ಕಂಬಳಿಯನ್ನು ಹೊದ್ದು ಕೊಡಲಿ ಹಿಡಿದು ಕಾಡಿಗೆ ಹೋಗಿ ಮರಗಳನ್ನು ಕಡಿದು ಬೇಸಾಯಕ್ಕಾಗಿ ನೆಲವನ್ನು ಸರಿಪಡಿಸಿಕೊಂಡನು; ಕಡಿದ ಮರಗಳ ಕೊಂಬೆಗಳಿಗೆ ಬೆಂಕಿ ಹಚ್ಚಿ, ರಾಶಿಬಿದ್ದ ಬೂದಿಯನ್ನು ಹರಡಿ ಬತ್ತವನ್ನು ಬಿತ್ತಿದನು.

ಬತ್ತ ಬೆಳೆಯಿತು; ದಿನವೂ ಅವನು ಕಂಬಳಿ ಹೊದ್ದು ಅಲ್ಲಿಗೆ ಹೋಗಿ ಪೈರನ್ನು ಕಾಯುತ್ತಿದ್ದನು. ಒಂದು ದಿನ ಅವನಿಗೆ ತುಂಬಾ ಆಯಾಸವಾಗಿತ್ತು; ರಾತ್ರಿ ಮಲಗಿದವನು ಪೂರಾ ನಿದ್ದೆಹೊಡೆದನು. ಅವನು ನಿದ್ರಿಸುತ್ತಿರುವಾಗ ಚಿನ್ನದ ರೆಕ್ಕೆಗಳ ನವಿಲೊಂದು ಅಲ್ಲಿಗೆ ಬಂದು ಪೈರನ್ನು ತಿಂದು ಹಾಕಿತು. ಬೆಳಗಾಗ ಎದ್ದು ನೋಡಿದನು; ತನ್ನ ಪೈರು ನಾಶವಾಗಿತ್ತು; ಗೊಳೊ ಎಂದು ಅತ್ತನು. ಆದರೆ ಗದ್ದೆಯಲ್ಲಿ ಒಂದು ಬಳಿ ಒಂದು ಚಿನ್ನದ ಗರಿ ಬಿದ್ದಿತ್ತು. ಅವನು ಅದನ್ನು ಮನೆಗೆ ತೆಗೆದುಕೊಂಡು ಹೋಗಿ ಚಾವಣಿಗೆ ಸಿಕ್ಕಿಸಿದನು.

ಒಂದು ದಿನ ಒಬ್ಬ ಕ್ಷೌರಿಕ ಆ ಹಳ್ಳಿಗೆ ಬಂದನು. ಇವರ ಮನೆಯ ಚಾವಣಿಗೆ ಸಿಕ್ಕಿಸಿರುವ ಚಿನ್ನದ ಗರಿಯನ್ನು ನೋಡಿ, ಈ ಸುದ್ದಿಯನ್ನು ರಾಜನಿಗೆ ವರದಿ ಮಾಡಿದನು. ರಾಜ, 'ಆ ಗರಿಯೊಂದಿಗೆ ಹುಡುಗನನ್ನು ಇಲ್ಲಿಗೆ ಕರೆದುಕೊಂಡು ಬಾ' ಎಂದು ತನ್ನ ಸಿಪಾಯಿಗೆ ಹೇಳಿದನು. ಎದುರಿಗೆ ಬಂದು ನಿಂತ ಹುಡುಗನನ್ನು ರಾಜ, 'ನಿನಗೆ ಈ ಗರಿ ಎಲ್ಲಿ ಸಿಕ್ಕಿತು' ಎಂದು ಕೇಳಿದನು. ಅದು ತನ್ನ ಜಮೀನಿನಲ್ಲಿ ಬಿದ್ದಿತ್ತೆಂದು ಆ ಹುಡುಗ ಹೇಳಿದನು.

ಇದನ್ನು ಕೇಳಿದ ರಾಜ, 'ಈ ಗರಿ ಯಾವ ಪ್ರಾಣಿಯದೋ ಅದನ್ನು ನೀನು ನನಗೆ ತಂದು ಒಪ್ಪಿಸಬೇಕು; ಇಲ್ಲವಾದರೆ, ನಿನ್ನನ್ನು ನೆಲದಲ್ಲಿ ಹೂಳಿ ತಲೆಯ ಮೇಲೆ ಬೆಂಕಿಯನ್ನು ಹಚ್ಚಿಸುವೆನು' ಎಂದನು.

ಚಿಕ್ಕ ಹುಡುಗನಿಗೆ ತುಂಬಾ ಹೆದರಿಕೆಯಾಯಿತು. ತನ್ನ ಕೊಡಲಿಯನ್ನೂ ಕಂಬಳಿಯನ್ನೂ ಎತ್ತಿಕೊಂಡು ತನ್ನ ಜಮೀನಿನ ಬಳಿಗೆ ಓಡಿದನು. ಅಲ್ಲಿ ಅವನಿಗೆ ನವಿಲಿನ ಹೆಜ್ಜೆ ಗುರುತು ಕಂಡು ಬಂತು; ಅದನ್ನೇ ಅನುಸರಿಸಿ ನಡೆದನು. ಆದರೆ ಸ್ವಲ್ಪ ದೂರ ಹೋದ ಮೇಲೆ ಹೆಜ್ಜೆಗುರುತು ಅಲ್ಲಿಗೇ ಮುಗಿದಿರುವುದನ್ನು ಕಂಡನು; ಅಲ್ಲಿ ನವಿಲು ಆಕಾಶಕ್ಕೆ ಹಾರಿಹೋಗಿತ್ತು. ಅವನು ಅಲ್ಲೇ ಕುಳಿತು ಅತ್ತನು. ಹೀಗೆ ಅಳುತ್ತಿದ್ದಾಗ ಅವನ ಬಳಿಗೆ ಬಂದ ಸಂಭಾರ ಮೃಗ, 'ತಮ್ಮ, ಏಕೆ ಅಳುತ್ತಿದ್ದೀಯೆ?' ಎಂದಿತು.

ಹುಡುಗ ಹೇಳಿದನು, 'ಸಂಭಾರಣ್ಣ, ಚಿನ್ನದ ರೆಕ್ಕೆಗಳ ನವಿಲನ್ನು ಹಿಡಿದು ತರಬೇಕೆಂದು ನನಗೆ ರಾಜನ ಅಪ್ಪಣೆಯಾಗಿದೆ. ಅದರ ಸುಳಿವೇ ನನಗೆ ಸಿಕ್ಕಲಿಲ್ಲ. ಇನ್ನು ರಾಜ ನನ್ನನ್ನು ಹೂಳಿಸಿ ನೆತ್ತಿಯ ಮೇಲೆ ಬೆಂಕಿಯನ್ನು ಹಚ್ಚಿಸುತ್ತಾನೆ.'

ಅದಕ್ಕೆ ಆ ಸಂಭಾರ ಹುಡುಗನನ್ನು ತನ್ನ ಬೆನ್ನ ಮೇಲೆ ಕೂರಿಸಿಕೊಂಡು ಕಾಡಲ್ಲೆಲ್ಲಾ ಸುತ್ತಾಡಿತು. ಒಂದು ಬಳಿಯಲ್ಲಿ ಚಿನ್ನದ ನವಿಲಿನ ಹೆಜ್ಜೆಗುರುತು ಮತ್ತೆ ಕಂಗೊಳಿಸಿತು. ಹುಡುಗನನ್ನು ಅಲ್ಲಿ ಇಳಿಸಿ ಅದು ಹೊರಟುಹೋಯಿತು. ಅವನು ನವಿಲಿನ ಹೆಜ್ಜೆಗುರತನ್ನೇ ಹಿಡಿದು ಮುಂದೆ ಹೋದನು. ಆ ಗುರುತು ಮತ್ತೆ ಇನ್ನೊಂದು ಬಳಿ ಮಾಯವಾಗಿತ್ತು.

ಹುಡುಗ ಅಳುತ್ತ ಕುಳಿತನು. ಈಗ ಒಂದು ಜಿಂಕೆ ಅವನ ಬಳಿಗೆ ಬಂದು ಕೇಳಿತು, 'ಏಕೆ ಅಳುವೆ, ತಮ್ಮ.'

ಹುಡುಗ ಹೇಳಿದನು, 'ಜಿಂಕೆಯಣ್ಣ, ಚಿನ್ನದ ರೆಕ್ಕೆಗಳ ನವಿಲನ್ನು ಹಿಡಿದು ತರಬೇಕೆಂದು ನನಗೆ ರಾಜನ ಅಪ್ಪಣೆಯಾಗಿದೆ. ಅದರ ಸುಳಿವೇ ನನಗೆ ಸಿಕ್ಕಲಿಲ್ಲ. ಇನ್ನು ರಾಜ ನನ್ನನ್ನು ಹೂಳಿಸಿ, ನೆತ್ತಿಯ ಮೇಲೆ ಬೆಂಕಿಯನ್ನು ಹಚ್ಚಿಸುತ್ತಾನೆ.'

ಅದಕ್ಕೆ ಆ ಜಿಂಕೆ ಆ ಹುಡುಗನನ್ನು ತನ್ನ ಬೆನ್ನ ಮೇಲೆ ಕೂರಿಸಿಕೊಂಡು ಕಾಡಲ್ಲೆಲ್ಲಾ ಸುತ್ತಾಡಿತು. ಒಂದು ಬಳಿಯಲ್ಲಿ ಚಿನ್ನದ ನವಿಲಿನ ಹೆಜ್ಜೆಗುರುತು ಮತ್ತೆ ಕಂಗೊಳಿಸಿತು. ಹುಡುಗನನ್ನು ಅಲ್ಲಿ ಇಳಿಸಿ ಅದು ಹೊರಟುಹೋಯಿತು. ಅವನು ನವಿಲಿನ ಹೆಜ್ಜೆಗುರುತನ್ನೇ ಹಿಡಿದು ಮುಂದೆ ಹೋದನು. ಆ ಗುರುತು ಮತ್ತೊಂದು ಬಳಿ ಮಾಯವಾಗಿತ್ತು. ಆ ನವಿಲು ಅಲ್ಲಿ ಆಕಾಶಕ್ಕೆ ಹಾರಿಹೋಗಿತ್ತೇನೋ!

ಆ ಹುಡುಗ ಅಳುತ್ತ ಕುಳಿತನು. ಆ ಹಾದಿಯಲ್ಲಿ ಹೋಗುತ್ತಿದ್ದ ಒಂದು ಹುಲಿ ಕೇಳಿತು, 'ತಮ್ಮ ಏಕೆ ಅಳುತ್ತಿರುವೆ.'

ಹುಡುಗ ಹೇಳಿದನು, 'ಹುಲಿಯಣ್ಣ, ಚಿನ್ನದ ರೆಕ್ಕೆಗಳ ನವಿಲನ್ನು ಹಿಡಿದು ತರಬೇಕೆಂದು ನನಗೆ ರಾಜನ ಅಪ್ಪಣೆಯಾಗಿದೆ. ಅದರ ಸುಳಿವೇ ನನಗೆ ಸಿಕ್ಕಲಿಲ್ಲ. ಇನ್ನು ರಾಜ ನನ್ನನ್ನು ಹೂಳಿಸಿ ನೆತ್ತಿಯ ಮೇಲೆ ಬೆಂಕಿಯನ್ನು ಹಚ್ಚಿಸುತ್ತಾನೆ.'

ಅದಕ್ಕೆ ಆ ಹುಲಿ ಆ ಹುಡುಗನನ್ನು ತನ್ನ ಬೆನ್ನ ಮೇಲೆ ಕೂರಿಸಿಕೊಂಡು ಕಾಡಲ್ಲೆಲ್ಲಾ ಓಡಾಡಿ ಒಂದು ಸ್ಥಳಕ್ಕೆ ಬಂದು ನಿಂತಿತು. ಅಲ್ಲೊಂದು ಕಡಿದಾದ, ವಿಕಾರವಾದ ಬೆಟ್ಟವೂ, ಮಟ್ಟವಾದ ಬಯಲೂ ಇದ್ದವು. ಅಲ್ಲಿ ಹಸಿರು ಬಿದಿರುಗಳು ಕಚ್-ಮಚ್, ಕಚ್-ಮಚ್ ಎಂದು ಶಬ್ದ ಮಾಡುತ್ತಿದ್ದವು; ಒಣಗಿದ ಬಿದಿರುಗಳು ತಂಬಟೆಯ ಹೊಯ್ಲಿನಂತೆ ಶಬ್ದಮಾಡುತ್ತಿದ್ದವು. ಅಲ್ಲಿ ಪುಷ್ಪಭರಿತ ವೃಕ್ಷಗಳಿದ್ದವು; ಆ ಸ್ಥಳದಲ್ಲಿ ಹನ್ನೆರಡು ಕರಡಿಗಳು ತಮ್ಮ ಪಂಜಗಳನ್ನು ಗಾಳಿಯಲ್ಲಿ ಅಲ್ಲಾಡಿಸುತ್ತಾ 'ಹೋ!' ಎಂದು ಕಿರಿಚಿ ಸಾಲುಗಟ್ಟಿ ಕುಸಿದವು. ಅಲ್ಲಿ ಎಲೆಯೊಂದು ಉರುಳಿತು; ಆ ದೃಶ್ಯವನ್ನು ನೋಡಲು ಮೂವತ್ತೈದು ಹುಲಿಗಳು ಧಾವಿಸಿದವು. ಅದೊಂದು ಮಾಯಾಪ್ರಪಂಚ; ಅಲ್ಲಿ ದೂರದಲ್ಲಿ ಒಂದು ಮಹಾವೃಕ್ಷದ ಮೇಲೆ ಚಿನ್ನದ ನವಿಲು ನೆಲಸಿರುವುದು ಆ ಹುಡುಗನ ಕಣ್ಣಿಗೆ ಬಿತ್ತು. ಅದೂ ಬಲು ದೂರದಲ್ಲಿತ್ತು; ಇಷ್ಟು ಚಿಕ್ಕವನು ಅಲ್ಲಿಗೆ ಹೇಗೆ ಹೋಗಬಲ್ಲ? ಹುಡುಗ ಅಲ್ಲೇ ಕುಳಿತು ಅಳುತ್ತಾ ಇದ್ದನು. ಅಲ್ಲಿಗೊಂದು ಆನೆ ಬಂತು; ಅದು ಕೇಳಿತು, 'ತಮ್ಮ, ಏಕೆ ಅಳುತ್ತಿರುವೆ?'



ಹುಡುಗ ಹೇಳಿದನು, 'ಆನೆಯಣ್ಣಾ, ಚಿನ್ನದ ರೆಕ್ಕೆಗಳ ನವಿಲನ್ನು ತರಬೇಕೆಂದು ನನಗೆ ರಾಜನ ಅಪ್ಪಣೆಯಾಗಿದೆ. ಅದರ ಸುಳಿವೇನೋ ನನಗೆ ಸಿಕ್ಕಿತು, ನಿಜ; ಆದರೆ ಅಷ್ಟು ದೂರದಲ್ಲಿರುವ ನವಿಲನ್ನು ಹಿಡಿದು ತರುವುದು ನನಗೆ ಅಸಾಧ್ಯವಾಗಿದೆ. ಬರಿಗೈಯಲ್ಲಿ ಊರಿಗೆ ಹೋದರೋ, ರಾಜ ನನ್ನನ್ನು ಹೂಳಿಸಿ ನೆತ್ತಿಯ ಮೇಲೆ ಬೆಂಕಿಯನ್ನು ಹಚ್ಚಿಸುತ್ತಾನೆ.'

ಆದಕ್ಕೆ ಆನೆ ಆ ಹುಡುಗನನ್ನು ತನ್ನ ಬೆನ್ನ ಮೇಲೆ ಕೂರಿಸಿಕೊಂಡು ಚಿನ್ನದ ನವಿಲಿರುವ ಮರದ ಬಳಿಗೆ ಕರೆದುಕೊಂಡು ಹೋಯಿತು. ಅದು ಮರವನ್ನು ಮುರಿದು ಹಾಕಿತು; ನವಿಲು ನೆಲಕ್ಕೆ ಬಿತ್ತು; ಹುಡುಗ ಅದನ್ನು ಹಿಡಿದುಕೊಂಡನು.

ಚಿನ್ನದ ನವಿಲನ್ನು ಹಿಡಿದು ತಂದ ಹುಡುಗನನ್ನು ಕಂಡು, ರಾಜನಿಗೆ ಅಪಾರ ಸಂತೋಷವಾಯಿತು. ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿದನು. ರಾಜ ಗತಿಸಿದನಂತರ ಆ ಹುಡುಗನೇ ಆ ರಾಜ್ಯದ ಅಧಿಪತಿಯಾಗಿದ್ದನು.

## ಕದ್ದ ಕಣ್ಣುಗಳು

ಕಾಡು ಮೇಡುಗಳಿಂದ ಕೂಡಿ ಸುಂದರವಾಗಿರುವ ಬಸ್ತೆರಿನ ಮೇಲ್ನಾಡಿನಿಂದ ಬಂದ ಕಥೆಯೊಂದು ಇಲ್ಲಿದೆ. ನಿಮ್ಮ ಪ್ರಾಣವನ್ನು ನಿಮ್ಮ ಶರೀರದ ಹೊರಗೆ ಬೇರೆ ಕಡೆ – ಅದಕ್ಕೆ ಅಪಾಯವೊದಗದಂತೆ – ಬಚ್ಚಿಡುವುದು ಸಾಧ್ಯವೆಂಬ ಸರ್ವಸಾಮಾನ್ಯ ನಂಬಿಕೆಯ ಮೇಲೆ ಈ ಕಥೆ ಬಹುಮಟ್ಟಿಗೆ ನಿಂತಿದೆ. ಹೀಗೆ ಬೇರೆಯವರ ಪ್ರಾಣವನ್ನು ತನ್ನಲ್ಲಿ ತುಂಬಿಕೊಂಡಿರುವ ವಸ್ತುವಿಗೆ ಒದಗುವ ನಷ್ಟಗಳೆಲ್ಲವೂ ಆದರ ಮಾಲಿಕನಿಗೂ – ಅವನೆಷ್ಟೇ ದೂರದಲ್ಲಿರಲಿ – ಒದಗುತ್ತವೆ ಎಂಬುದು ಇಲ್ಲಿನ ನಿಯಮ.

ಒಬ್ಬ ಮರಿಯಾ ರಾಜನಿದ್ದನು; ಅವನಿಗೆ ಏಳು ಮಂದಿ ಗಂಡು ಮಕ್ಕಳಿದ್ದರು. ಪಕ್ಕದ ರಾಜ್ಯದಲ್ಲಿ ಇನ್ನೊಬ್ಬ ಮರಿಯಾ ರಾಜನಿದ್ದನು; ಅವನಿಗೆ ಏಳು ಮಂದಿ ಹೆಣ್ಣು ಮಕ್ಕಳಿದ್ದರು. ಇಬ್ಬರಿಗೂ ಇದ್ದದ್ದು ಒಂದೇ ಸಮಸ್ಯೆ; ಮಕ್ಕಳಿಗೆ ಮದುವೆ ಮಾಡುವುದು. ಇವರಿಗೆ ಪರಸ್ಪರ ಪರಿಚಯವಿರಲಿಲ್ಲವಾಗಿ, ತಮ್ಮೊಳಗೇ ಕೊಟ್ಟು ತಂದು ಸೂಕ್ತವೂ ಸುಲಭವೂ ಆದ ರೀತಿಯಲ್ಲಿ ಈ ಸಮಸ್ಯೆಯನ್ನು ಬಗೆಹರಿಸುವುದು ಹೊಳೆದಿರಲಿಲ್ಲ.

ಕಡೆಗೆ ಅವನ ಏಳು ಮಕ್ಕಳೂ ಹೆಣ್ಣುಗಳನ್ನು ಹುಡುಕಲು ತಾವೇ ಹೊರಟರು. ಆದರೆ ರಾಜ ಅವರಲ್ಲಿ ಒಬ್ಬನಾದರೂ ತನ್ನ ಜೊತೆಗೇ ಉಳಿದು ರಾಜ್ಯಭಾರದಲ್ಲಿ ನೆರವಾಗಬೇಕೆಂದು ತಿಳಿಸಿ, ಅವರಲ್ಲಿ ತನಗೆ ಬಲು ಅಚ್ಚುಮೆಚ್ಚಾಗಿದ್ದ ಕಟ್ಟಕಡೆಯ ಮಗನನ್ನು ಮನೆಯಲ್ಲೇ ನಿಲ್ಲಿಸಿಕೊಂಡನು. ಉಳಿದ ಆರುಮಂದಿಯೂ ಕನ್ಯಾರ್ಥಿಗಳಾಗಿ ಸುತ್ತುತ್ತಿದ್ದಾಗ ಮರಿಯಾ ರಾಜನಿಗೆ ಪ್ರಾಪ್ತ ವಯಸ್ಕರಾದ ಏಳುಮಂದಿ ಹೆಣ್ಣುಮಕ್ಕಳಿರುವ ಸಂಗತಿ ಅವರಿಗೆ ತಿಳಿಯಿತು. ಆರುಜನವೂ ಅಲ್ಲಿಗೆ ಹೋದರು; ಅವನ ಆರು ಮಂದಿ ಪುತ್ರಿಯರನ್ನೂ ಸಂಭ್ರಮದಿಂದ ಮದುವೆಯಾದರು. ಆಮೇಲೆ ತಮ್ಮ ಮಡದಿಯರನ್ನೂ, ಮನೆಯಲ್ಲಿ ಬಿಟ್ಟು ಬಂದಿದ್ದ ತಮ್ಮ ಚಿಕ್ಕ ತಮ್ಮನಿಗೆ ಆಗುತ್ತಾಳೆಂದು ಏಳನೆಯವಳನ್ನೂ ಕರೆದುಕೊಂಡು ತಮ್ಮ ರಾಜ್ಯದ ಕಡೆಗೆ ಹೊರಟರು.

ಬರುವ ದಾರಿಯಲ್ಲಿ ಕೆರೆಯ ಏರಿಯಮೇಲೆ ಒಂದು ದೊಡ್ಡ ಆಲದ ಮರವಿತ್ತು. ದಣಿವಾರಿಸಿಕೊಳ್ಳಲು ಅದರ ನೆರಳಿನಲ್ಲಿ ತಂಗಿದರು. ಆ ಕೆರೆಯಲ್ಲಿ ಒಬ್ಬ ರಾಕ್ಷಸನಿದ್ದನು. ಮಹಾಕ್ರೂರಿಯಾದ ಅವನು ಈ ಸಪ್ತಸುಂದರಿಯರನ್ನು ಅಪಹರಿಸಲೂ, ಅವರ ಗಂಡಂದಿರನ್ನು ಕೊಂದು ಬಿಡಲೂ ತೀರ್ಮಾನಿಸಿದನು. ಸೂರ್ಯನ ಮೇಲೆ ಮೋಡ ಕವಿದು ಗ್ರಹಣ ಹಿಡಿಯುವಂತೆ, ಅವನು ಬಾನಿಗೇರಿ ಅಲ್ಲಿಂದ ಅವರ ಮೇಲೆ ಬಿದ್ದನು. ಆರು ಮಂದಿ ಸೋದರರೂ, ಅವರ ಕುದುರೆಗಳೊಂದಿಗೆ ಕಲ್ಲುಗಳಾದರು. ಆ ರಾಕ್ಷಸ ಹುಡುಗಿಯರನ್ನು ಹಿಡಿದು ತಂದು, ಒಂದು ಮರದ ಕೆಳಗೆ ಸೆರೆಹಾಕಿದನು. ಅವನು ದಿನವೂ ಕಾಡಿಗೆ ಹೋಗಿ ಗೆಡ್ಡೆಗೆಣಸುಗಳನ್ನು ತಂದು ಅವರಿಗೆ ತಿನ್ನಲು ಕೊಡುತ್ತಿದ್ದನು. ಬೆಳಗಾಗ ಮನೆಯನ್ನು ಬಿಟ್ಟು ಹೊರಟವನು, ರಾತ್ರಿಗೆ ಹಿಂದಿರುಗುತ್ತಿದ್ದನು.

ಏಳನೆಯವನಾದ ಅವರ ಚಿಕ್ಕ ತಮ್ಮನಿಗೆ ಕಾದು ಕಾದು ಸಾಕಾಯಿತು. ಆರು ಮಂದಿಯೂ ಯಾವುದಾದರೂ ಅನಾಹುತಕ್ಕೊಳಗಾಗಿರಬಹುದೋ ಎಂದು ಮನೆಯವರೆಲ್ಲ ಚಿಂತಿಸತೊಡಗಿದರು. ಆಗ ಅವನು ತಾನೇ ಹೋಗಿ ಹುಡಕತೊಡಗಿದನು. ವಿಚಾರಿಸುತ್ತಾ, ನೆರೆಯ ಮರಿಯಾ ರಾಜನನ್ನು ಕಾಣಲಾಗಿ, 'ನಿನ್ನ ಸೋದರರು ತಮ್ಮ ಮಡದಿಯರೊಂದಿಗೆ ನಿಮ್ಮೂರಿಗೆ ಪ್ರಯಾಣ ಮಾಡಿ ಎಷ್ಟೋ ದಿನಗಳಾದವು' ಎಂದವನು ತಿಳಿಸಿದನು. ಅವರು ಯಾವ ದಾರಿಯಲ್ಲಿ ಹೋದರೋ ಅದನ್ನೇ ಹಿಡಿದು ನಡೆಯುತ್ತಾ ಇವನು ಅದೇ ಕೆರೆಯ ಬಳಿಗೆ ಬಂದು, ಅಲ್ಲಿ ಆಲದ ಮರದ ಕೆಳಗೆ ಏಳು ಮಂದಿ ರಾಜಕುಮಾರಿಯರು ಇರುವುದನ್ನು ಕಂಡನು. ಅವರು ನಡೆದ ಸಂಗತಿಯಷ್ಟನ್ನೂ ವಿವರಿಸಿ, 'ಇನ್ನು ಸಂಜೆಯಾಯಿತು; ರಾಕ್ಷಸ ಮನೆಗೆ ಬರುವ ಸಮಯವಿದು; ನೀನು ಇಲ್ಲಿಂದ ಬೇಗ ಹೋಗಿಬಿಡು' ಎಂದು ಬೇಡಿಕೊಂಡರು.

ಆಗ ತನ್ನ ಮಾಯೆಯಿಂದ ಒಂದು ನೊಣದ ರೂಪವನ್ನು ತಾಳಿ ಆಲದ ಮರದಲ್ಲಿ ಹುದುಗಿಕೊಂಡನು. ರಾಕ್ಷಸನಿಗೆ ಇದೊಂದೂ ಪತ್ತೆಯಾಗಲೇ ಇಲ್ಲ. ಮರುದಿವಸ ಬೆಳಗಾಗ ಅವನು ತನ್ನ ಕೆಲಸಕ್ಕೆ ಎಂದಿನಂತೆ ಹೊರಟನು. ಆಗ ರಾಜಕುಮಾರ ತನ್ನ ನಿಜರೂಪವನ್ನು ಧರಿಸಿ ಆ ಹುಡುಗಿಯರಿಗೆ ಹೇಳಿದನು, 'ರಾಕ್ಷಸ ಇಲ್ಲಿಗೆ ಬಂದಾಗ ಅವನ ಪ್ರಾಣವನ್ನು ಎಲ್ಲಿಟ್ಟದ್ದಾನೆಂಬುದನ್ನು ಕೇಳಿ ತಿಳಿದುಕೊಳ್ಳಿ' ಎಂದನು. ಆ ಸಂಜೆ ರಾಕ್ಷಸ ಮನೆಗೆ ಬರುವುದು ಸ್ವಲ್ಪ ತಡವಾಯಿತು. ಅವನು ಹೊತ್ತಾಗಿ ಬಂದದ್ದಕ್ಕೆ ಆತಂಕಗೊಂಡಂತೆ ನಟಿಸುತ್ತಾ ಆ ಹುಡುಗಿಯರು, 'ನೀನು ಕೆಲವು ವೇಳೆ ಬಹಳ ತಡವಾಗಿ ಬರುತ್ತೀಯೆ, ನಮಗೆ ಅದರಿಂದ ಆತಂಕವಾಗುತ್ತದೆ. ನಿನ್ನ ಪ್ರಾಣವನ್ನು ಎಲ್ಲಿಟ್ಟಿದ್ದೀಯೆ ಎಂಬುದನ್ನು ತಿಳಿಸಿದರೆ, ನಿನಗೆ ಅಪಾಯವೊದಗಿದಾಗ ನಾವು ಕೂಡಲೇ ಬಂದು ನಿನಗೆ ನೆರವಾಗುವುದು ಸಾಧ್ಯವಾಗುತ್ತದೆ' ಎಂದು ನಯವಾಗಿ ನುಡಿದರು.

ರಾಕ್ಷಸ ಹೇಳಿದನು, 'ಏಳು ಕಡಲುಗಳ ಮತ್ತು ಹದಿನಾರು ಹೊಳೆಗಳ ಆಚೆಗೊಂದು ಆಲದ ಮರವಿದೆ. ಅದರ ಮೇಲೆ ಚಿನ್ನದ ಹಕ್ಕಿಯೊಂದು ಕುಳಿತಿದೆ. ನನ್ನ ಪ್ರಾಣ ಅದರಲ್ಲಿದೆ.'

ಮಾರನೆಯ ದಿನ ಬೆಳಗಾಗುತ್ತಲೆ ರಾಕ್ಷಸ ಕೆಲಸದ ಮೇಲೆ ಹೊರಟುಹೋದನು. ಆ ಕೂಡಲೆ ಆ ಹುಡುಗಿಯರು ಆ ಹಕ್ಕಿಯ ರಹಸ್ಯವನ್ನು ರಾಜಕುಮಾರನಿಗೆ ತಿಳಿಸಿದರು.

ಅದನ್ನು ಹುಡುಕಲು ಇವನು ಹೊರಟನು. ಅವನ ದಾರಿಯಲ್ಲಿ ಒಂದು ಈಚಲುಮರವಿತ್ತು; ಅದರಲ್ಲೊಂದು ಹಕ್ಕಿಯ ಗೂಡಿತ್ತು. ಆ ಗೂಡಿನಲ್ಲಿ ಹಕ್ಕಿ ಮೊಟ್ಟೆಯಿಟ್ಟು ಕಾವು ಕೊಟ್ಟು ಮರಿಗಳಾಗುವುದೇ ತಡ, ಒಂದು ಸರ್ಪ ಅಲ್ಲಿಗೆ ಬಂದು ಅವುಗಳನ್ನು ತಿಂದು ಹಾಕುತ್ತಿತ್ತು. ಹಾಗೆಯೇ ಹೋಗುತ್ತಿರುವಾಗ ಅವನ ಕಿವಿಗೆ ಮರಿಗಳ ಆರ್ತನಾದ ಕೇಳಿ ಬಂತು; ಹಾವು ಮರ ಹತ್ತುತ್ತಿರುವುದನ್ನು ಕಂಡನು. ತನ್ನ ಖಡ್ಗದಿಂದ ಅವನು ಹಾವನ್ನು ಕೊಂದು ಮುಂದೆ ಹೋದನು. ತಾಯಿ ಗೂಡಿಗೆ ಹಿಂದಿರುಗಿದಾಗ ಮರಿಗಳು ರಾಜಕುಮಾರನ ಕೃಪೆಯಿಂದ ತಾವು ಬದುಕಿಕೊಂಡ ಪರಿಯನ್ನು ವಿವರಿಸಿದವು. ತನ್ನ ಕೃತಜ್ಞತೆಯನ್ನು ಸೂಚಿಸುವುದಕ್ಕಾಗಿ ಹಕ್ಕಿ ಅವನ ಬಳಿಗೆ ಹಾರಿಹೋಗಿ, 'ನಾನು ನಿನ್ನೊಂದಿಗೆ ಬರುತ್ತೇನೆ; ಚಿನ್ನದ ಹಕ್ಕಿಯನ್ನು ಇಬ್ಬರೂ ಹುಡುಕೋಣ' ಎಂದಿತು.

ಬಹುಕಾಲದ ಮೇಲೆ ಅವರು ಏಳು ಕಡಲುಗಳೂ ಹದಿನಾರು ಹೊಳೆಗಳೂ ಇರುವ ಸ್ಥಳಕ್ಕೆ ಬಂದರು ಹಕ್ಕಿ ಹುಡುಗನನ್ನು ಬೆನ್ನಮೇಲೆ ಕೂರಿಸಿಕೊಂಡು ಅವುಗಳನ್ನು ದಾಟಿಸಿತು. ಅಲ್ಲೊಂದು ಆಲದ ಮರವಿತ್ತು; ಅದನ್ನು ಹತ್ತಿ ನೋಡಿದಾಗ ಅಲ್ಲೇ ಚಿನ್ನದ ಹಕ್ಕಿಯಿತ್ತು. ಇವನು ಹಕ್ಕಿಯನ್ನು ತನ್ನ ಕೈಗಳಲ್ಲಿ ಭದ್ರವಾಗಿ ಹಿಡಿದುಕೊಂಡ ಗಳಿಗೆಯಲ್ಲೇ, ಅಲ್ಲಿಗೆ ಬಲುದೂರದಲ್ಲಿ ಕಾಡಿನಲ್ಲಿ ಗೆಡ್ಡೆಗೆಣಸುಗಳನ್ನು ಕೀಳುತ್ತಿದ್ದ ರಾಕ್ಷಸನಿಗೆ ರೋಗ ತಗುಲಿತು.



ಮಿತ್ರ – ಪಕ್ಷಿಯು ರಾಜಕುಮಾರನನ್ನೂ ಅವನು ಗೆದ್ದ ನಿಧಿಯನ್ನೂ ಏಳು ಕಡಲುಗಳ ಮತ್ತು ಹದಿನಾರು ಹೊಳೆಗಳ ಈಚೆಗೆ ತಂದುಬಿಟ್ಟಿತು. ಸ್ವಲ್ಪಕಾಲದಲ್ಲೇ ಅವನು ಕೆರೆಯ ಬಳಿ ತನಗಾಗಿ ಕಾಯುತ್ತಿದ್ದ ಸಪ್ತಸುಂದರಿಯರನ್ನು ಕೂಡಿದನು. ಅವನು ಆಮೇಲೆ ಚಿನ್ನದ ಹಕ್ಕಿಯ ಗರಿಗಳನ್ನು ಕಿತ್ತನು; ರಾಕ್ಷಸನ ತಲೆಯ ಕೂದಲಷ್ಟೂ ಉದುರಿಹೋಯಿತು. ಅದರ ರೆಕ್ಕೆಗಳನ್ನು ಮುರಿದನು; ರಾಕ್ಷಸನ ತೋಳುಗಳು ಮುರಿದು ಬಿದ್ದವು. ಅದರ ಕಾಲುಗಳನ್ನು ಮುರಿದನು; ರಾಕ್ಷಸನ ಕಾಲುಗಳು ಮುರಿದುಹೋದವು. ಹೀಗೆ ಅಂಗಹೀನವಾದ ಹಕ್ಕಿಯನ್ನು ಹಿಡಿದುಕೊಂಡು ಅವನು ಕಾಡಿನಲ್ಲಿ ಕೇಳುವವರಿಲ್ಲದೆ ಬಿದ್ದಿದ್ದ ರಾಕ್ಷಸನ ಬಳಿಗೆ ಹೋಗಿ, 'ನೀನು ನನ್ನ ಸೋದರರನ್ನು ಬದುಕಿಸದೆ ಹೋದರೆ, ನಾನು ಈ ಹಕ್ಕಿಯ ಕೊರಳನ್ನು ಕತ್ತರಿಸಿ ಬಿಡುತ್ತೇನೆ, ನೀನೂ ಸಾಯುತ್ತೀಯೆ' ಎಂದನು.

ರಾಕ್ಷಸನಾದರೋ ತಡಮಾಡದೆ, ಭಯದಿಂದ ತತ್ತರಿಸುತ್ತಾ ಕಲ್ಲಾಗಿದ್ದ ಅವನ ಸೋದರರ ಬಳಿಗೆ ಹೋಗಿ ಅವರನ್ನು ಮತ್ತೆ ಬದುಕಿಸಿದನು. ಆದರೂ ರಾಜಕುಮಾರನು ಹಕ್ಕಿಯ ಕೊರಳನ್ನು ಮುರಿದೇ ಮುರಿದನು; ರಾಕ್ಷಸ ಕೂಡಲೆ ಸತ್ತನು.

ಅದರ ಈ ವಿವರಗಳೆಲ್ಲವನ್ನೂ ಚಿಕ್ಕ ತಮ್ಮ ತನ್ನ ಅಣ್ಣಂದಿರಿಗೆ ತಿಳಿಸಿದ ಮೇಲೆ ಅವರಿಗೆ ಇವನ ಶೌರ್ಯದ ಅರಿವುಂಟಾಗಿ ಹೆಮ್ಮೆಪಡುವ ಬದಲು ಹೊಟ್ಟೆ ಕಿಚ್ಚು ಹುಟ್ಟಿ ಇವನನ್ನು ತೀರಿಸಿಬಿಡುವ ಆಲೋಚನೆ ಹೊಳೆಯಿತು. ಅವರಲ್ಲಿ ಹಿರಿಯನಾದವನಿಗೆ ಇವನನ್ನು ಕೊಲ್ಲುವುದು ಸರಿಬೀಳಲಿಲ್ಲ; ಅವನ ಕಣ್ಣುಗಳನ್ನು ಕಿತ್ತರೆ ಸಾಕು ಎಂದು ಸಲಹೆ ಮಾಡಿದನು.

'ಹೊಳೆಯ ದಡಕ್ಕೆ ಹೋಗೋಣ ಬಾ. ಸ್ವಲ್ಪ ಮೀನು ಹಿಡಯೋಣ' ಎಂದು ಅವರು ಇವನನ್ನು ಪುಸಲಾಯಿಸಿದರು.

ಅಲ್ಲಿ ಅವನ ಕಣ್ಣುಗಳನ್ನು ಕಿತ್ತುಹಾಕಿ, ಎಲ್ಲಿಗಾದರೂ ಹೋಗೆಂದು ಕೈಬಿಟ್ಟು ಬಂದರು. ಅವರು ಆಲದ ಮರದ ಬಳಿಗೆ ಹಿಂದಿರುಗಿದಾಗ, ಅವರನ್ನು ತನ್ನ ಗಂಡನೆಲ್ಲಿ ಎಂದು ಏಳನೆಯ ಹುಡುಗಿ ಕೇಳಿದಳು. ಅವನೂ ಹಿಂದೆಯೇ ಬರುತ್ತಿದ್ದಾನೆಂದು ಅವರು ಹೇಳಿದರು. ಆ ಆರುಜನವೂ ಅವರ ಹೆಂಡಂದಿರೂ ತಮ್ಮೂರಿಗೆ ಹೊರಟರು. ಇಲ್ಲಿ ಏನೋ ಒಳತಂತ್ರ ನಡೆದಿರಬೇಕೆಂಬ ಸಂಶಯ ಬಂದು ಏಳನೆಯವಳು ಅವರೊಟ್ಟಿಗೆ ಊರಿಗೆ ಹೋಗದೆ ಉಳಿದುಕೊಂಡಳು. ಸ್ವಲ್ಪ ಕಾಲದಲ್ಲೇ ತನ್ನ ಗಂಡ ಕಣ್ಣು ಕಳೆದುಕೊಂಡು ಹೊಳೆಯಂಚಿನಲ್ಲಿ ಸಂಕಟ ಪಡುತ್ತಿರುವುದನ್ನು ಕಂಡಳು. ತನ್ನ ಜೊತೆಯಲ್ಲಿ ಬರಬೇಕೆಂದು ಬೇಡಿಕೊಂಡಳು. ಅವನು ಹೇಳಿದನು, 'ನೀನು ನನ್ನನ್ನು ಪ್ರೀತಿಸುತ್ತಿರುವುದು ನಿಜವಾದರೆ, ನಾನು ಹೇಳುವಂತೆ ಮಾಡು. ಇಂಥಾ ರಾಜನೊಬ್ಬನ ಊರಿಗೆ ಹೋಗು; ಅಲ್ಲಿ ಚೆಲುವೆಯಾದ ನಿನ್ನನ್ನು ಒಲಿಸಿಕೊಳ್ಳಲು ಪ್ರತಿಯೊಬ್ಬನೂ ಆಸೆ ಪಡುತ್ತಾನೆ. ಆದರೆ ಒಂದೇ ಬಾಣವನ್ನು ನೆಟ್ಟಗೆ ಬಿಟ್ಟು ಆಕಾಶವನ್ನು ಹೊಡೆಯುವ ಧೀರನನ್ನು ಮಾತ್ರ ಮದುವೆಯಾಗುತ್ತೇನೆಂದು ನೀನು ಹೇಳಿಬಿಡು.' ಹುಡುಗಿ ಅವನು ಹೇಳಿದಂತೆ ಮಾಡಿದಳು. ಅವಳನ್ನು ಕೈ ಹಿಡಿಯಲು ನೂರಾರು ಮುಂದಿ ಮುಂದೆ ಬಂದರು. ಆದರೆ ಬಾಣಬಿಟ್ಟು ಆಕಾಶವನ್ನು ಹೊಡೆಯುವುದು ಯಾರಿಗೂ ಆಗಲಿಲ್ಲ.

ಇತ್ತಲಾಗಿ ಈ ಅಂಧ ರಾಜಕುಮಾರ ಹೊಳೆಯನ್ನು ಹೇಗೋ ದಾಟಿ ಆಚೆಯ ದಡವನ್ನು ತಲಪಿದನು. ಅಲ್ಲೊಬ್ಬ ಮರಿಯಾ ತನ್ನ ಮುಸುಕಿನಜೋಳದ ಹೊಲಕ್ಕೆ ಮುತ್ತಿಗೆ ಹಾಕಿದ್ದ

ಹಕ್ಕಿಗಳನ್ನು ಓಡಿಸುತ್ತಿದ್ದನು. ಈ ಹುಡುಗ, 'ನಾನು ನಿನ್ನ ಹೊಲವನ್ನು ಕಾಯುತ್ತೇನೆ' ಎಂದು ಅವನಿಗೆ ಹೇಳಿದನು. ಮರಿಯನಿಗೆ ನಗೆ ಬಂತು, ಹಕ್ಕಿಗಳನ್ನು ಓಡಿಸುವುದು ಈ ಕುರುಡನಿಂದ ಆದೀತೆ? ಎಂದು.

'ನನ್ನನ್ನು ನಿನ್ನ ಹೊಲದ ಸುತ್ತಲೂ ಒಂದು ಸಲ ಬಳಸಿಕೊಂಡು ಬಾ. ನಿನಗೆ ಏನೇನು ಬೇಕೋ ಎಲ್ಲವನ್ನೂ ನಾನು ಖಂಡಿತವಾಗಿ ಮಾಡಿಕೊಡುತ್ತೇನೆ' ಎಂದನು ಹುಡುಗ.

ಮರಿಯಾ ಅದೇ ರೀತಿಯಲ್ಲಿ ಅವನಿಗೆ ತನ್ನ ಹೊಲದ ಪರಿಚಯವನ್ನು ಮಾಡಿಕೊಟ್ಟನು. ಹುಡುಗ ಬೇಕಾದಷ್ಟು ಕಲ್ಲುಗಳನ್ನು ಆರಿಸಿ ತಂದು ಹಾಕಿದನು. ಪಕ್ಕದಲ್ಲೇ ಒಂದು ಚಿಕ್ಕ ವೇದಿಕೆಯ ಮೇಲೆ ಹಾಯಾಗಿ ಕುಳಿತನು. ಹಕ್ಕಿಗಳ ರೆಕ್ಕೆ ಬಡಿತ ತನ್ನ ಕಿವಿಗೆ ಬಿದ್ದಾಗೆಲ್ಲ ಒಂದು ಬೊಗಸೆ ಕಲ್ಲುಗಳನ್ನು ಎತ್ತಿ ಆ ಸದ್ದಿನ ಕಡೆಗೆ ಬೀರುತ್ತಿದ್ದನು. ಹಕ್ಕಿಗಳು ಹೆದರಿ ಹಾರಿಹೋಗುತ್ತಿದ್ದವು.

ಆ ಹೊಳೆಯಲ್ಲಿ ಸಪ್ತ ಜಲಕನ್ಯೆಯರೂ, ಒಂದು ದೆವ್ವವು ವಾಸಮಾಡುತ್ತಿದ್ದರು. ಪ್ರತಿರಾತ್ರಿಯು ಅವರು ಈಚೆಗೆ ಬಂದು ಆಡುತ್ತಿದ್ದರು, ಕುಣಿಯುತ್ತಿದ್ದರು, ವೇದಿಕೆಯ ಮೇಲೆ ಕುಳಿತಿದ್ದ ಹುಡುಗನನ್ನು ಕಂಡು, 'ನಮ್ಮ ಜೊತೆಗೆ ನೀನೂ ಬಂದು ಕುಣಿ' ಎಂದರು. ತಾನು ಕುರುಡನಾಗಿರುವುದರಿಂದ ಹಾಗೆ ಮಾಡಲಾರೆನೆಂದು ಅವನು ಉತ್ತರ ಕೊಟ್ಟನು. ಅದಕ್ಕೆ ಆ ಜಲಕನ್ಯೆಯರು ಒಂದು ಜೊತೆ ಕಣ್ಣನ್ನು ತಂದುಕೊಟ್ಟರು. ಎಲ್ಲವನ್ನೂ ನೋಡುವುದೂ, ಅವರೊಂದಿಗೆ ಆಡುವುದೂ ಅವನಿಗೆ ಸಾಧ್ಯವಾಯಿತು. ಬೆಳಗಾಗುವ ಹೊತ್ತಿಗೆ ಅವರು ಕಣ್ಣುಗಳನ್ನು ತೆಗೆದುಕೊಂಡು ಹೋದರು. ರಾಜಕುಮಾರ ಮತ್ತೆ ಕುರುಡನಾದನು. ಹೀಗೆಯೇ ಬಹುಕಾಲ ನಡೆಯಿತು. ಒಂದು ದಿನ ಇವನು ತನ್ನ ಕಥೆಯನ್ನೆಷ್ಟನ್ನೂ ಮರಿಯನಿಗೆ ಹೇಳಿದನು. ತನ್ನ ಬೆಳೆಯನ್ನು ಹಕ್ಕಿಗಳ ಕಾಟದಿಂದ ಕಾಪಾಡಿದ ಕಾರಣ ಮರಿಯನಿಗೆ ಬಲು ಸಂತೋಷವಾಯಿತು; ಇವನ ಕಣ್ಣುಗಳನ್ನು ಜಲಕನ್ಯೆಯರಿಂದ ಇವನಿಗೆ ಕೊಡಿಸಲು ನೆರವಾಗುವುದಾಗಿ ನಿರ್ಧರಿಸಿದನು. ಅವನು ಗ್ರಾಮದ ಇತರರನ್ನೂ ಕರೆದುಕೊಂಡು ಬಂದನು; ಎಲ್ಲರೂ ಹೊಳೆಯಂಚಿನ ಪೊದೆಗಳಲ್ಲಿ ಅಡಗಿಕೊಂಡು ಹೊಂಚುಹಾಕುತ್ತಿದ್ದರು. ಸಂಜೆಗೆ ಸರಿಯಾಗಿ ಜಲಕನ್ಯೆಯರೂ ದೆವ್ವವೂ ಕ್ರೀಡೆಗಾಗಿ ಅಲ್ಲಿಗೆ ಬಂದು, ಯಥಾಪ್ರಕಾರ ಹುಡುಗನಿಗೆ ಕಣ್ಣುಗಳನ್ನು ಕೊಟ್ಟರು. ಅವರು ಕೊಟ್ಟದ್ದೇ ತಡ, ಇವನು ಎದ್ದು ಓಡಿದನು; ಜಲಕನ್ಯೆಯರೂ ಭೂತವೂ ಅವನನ್ನು ಬೆನ್ನಟ್ಟಿ ಬರಲು, ಪೊದೆಗಳಿಂದ ಹೊರಬಿದ್ದ ಹಳ್ಳಿಗರು ಅವರನ್ನು ತಡೆದು ಹೊಳೆಯ ನೀರಿಗೆ ಅಟ್ಟಿಬಿಟ್ಟರು.

ಈಗ ಆ ರಾಜಕುಮಾರ ತನ್ನ ಪ್ರೇಯಸಿಯನ್ನು ಹುಡುಕಲು ಹೊರಟನು. ಮಧ್ಯ ಮಾರ್ಗದಲ್ಲೇ ಅವನಿಗೆ ಬೇಕಾದ ಸುದ್ದಿ ಸಿಕ್ಕಿತು; ಸಿಕ್ಕಿದವರೆಲ್ಲರೂ ಚೆಲುವೆಯೊಬ್ಬಳ ಮಾತನ್ನೇ ಆಡುತ್ತಿದ್ದರು; ಅವಳು ಯಾರು ನೇರವಾಗಿ ಬಾಣಬಿಟ್ಟು ಆಕಾಶವನ್ನು ಹೊಡೆಯುವರೋ ಅವನನ್ನು ಮಾತ್ರ ಮದುವೆಯಾಗುವಳಂತೆ ಎನ್ನುತ್ತಿದ್ದರು. ಇವನು ಅಲ್ಲಿಗೆ ಹೋದನು. ತತ್‌ಕ್ಷಣವೇ ಬಾಣವನ್ನು ಆಕಾಶಕ್ಕೆ ಗುರಿಯಿಟ್ಟು ಹೊಡೆದನು. ಅವಳನ್ನು ಮದುವೆಯಾದನು. ಕೊಳೆಯಾಗಿ ಹರುಕಲಾಗಿದ್ದ ಬಟ್ಟೆಗಳನ್ನು ಧರಿಸಿ ಬಂದಿದ್ದ

ಅವನನ್ನು ಇವಳು ಗುರುತು ಹಿಡಿಯುವುದಕ್ಕೇ ಆಗಲಿಲ್ಲ. ಆದರೆ ರಾಜನು ಕೊಟ್ಟಿದ್ದ ವಸ್ತ್ರಾಭರಣಗಳನ್ನು ಧರಿಸಿ ಅವನು ಬಂದು ನಿಂತಾಗ ಅವನು ಯಾರೆಂಬುದು ಅವಳಿಗೆ ಗೊತ್ತಾಯಿತು. ಅವನು ನಿಜವಾದ ರಾಜಕುಮಾರನೆಂಬುದು ರಾಜನಿಗೆ ತಿಳಿಯಿತು; ಅವನು ವಧೂವರರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಸೇನಾಪರಿಕರದೊಂದಿಗೆ ಅವರನ್ನು ಬೀಳ್ಕೊಟ್ಟನು.

ಅವನು ತನ್ನ ತಂದೆಯ ರಾಜಧಾನಿಗೆ ಬಂದು, ಅರಮನೆಯ ಸಮೀಪದಲ್ಲಿ ಬಿಡದಿ ಮಾಡಿ, ತಾನು ಯಾರೆಂಬುದನ್ನು ತಿಳಿಸದೆ, ತಂದೆಯನ್ನೂ ಸೋದರರನ್ನೂ ಔತಣಕ್ಕೆ ಆಹ್ವಾನಿಸಿದನು. ಅವರು ಮಾತಾಡುತ್ತಿದ್ದಾಗ ವೃದ್ಧ ರಾಜ ತನ್ನ ಕಿರಿಯ ಮಗ ತಪ್ಪಿಸಿಕೊಂಡಿದ್ದಾನೆಂದು ಹೇಳಿದನು. ಆಗ ರಾಜಕುಮಾರ ತಾನೂ ಒಂದು ಕಥೆಯನ್ನು ಹೇಳುವುದಾಗಿ ತಿಳಿಸಿ ತನ್ನ ಕಥೆಯನ್ನೇ ಆದ್ಯಂತವಾಗಿ ಹೇಳಿದನು. ವೃದ್ಧ ರಾಜನಿಗೆ ತನ್ನ ಮಗನ ಗುರುತು ಸಿಕ್ಕಿತು. ಪರಮಾನಂದವಾಯಿತು. ದುಷ್ಟರಾದ ಅವನ ಆರುಮಂದಿ ಸೋದರರನ್ನೂ ರಾಜ್ಯಭ್ರಷ್ಟರನ್ನಾಗಿ ಮಾಡಿದನು. ಕಾಲಕ್ರಮದಲ್ಲಿ ಈ ಕಿರಿಯ ರಾಜಕುಮಾರ, ತಂದೆಯ ಅನಂತರ, ರಾಜನಾದನು.

## ಜಿಂಕೆ–ಹುಡುಗಿ

ಒಬ್ಬ ರಾಜ ಬೇಟೆಗಾಗಿ ಕಾಡಿಗೆ ಹೋದನು; ಬಸಿರಿಯಾಗಿದ್ದ ಜಿಂಕೆಯನ್ನು ಹಿಡಿದನು. ಅವನು ಅದರ ಕಾಲುಕಟ್ಟಿ ಮನೆಗೆ ತಂದನು. ಆದರೆ ಅವನ ಮಗ ಕಟ್ಟು ಬಿಚ್ಚಿ ಅದನ್ನು ಬಿಡುಗಡೆ ಮಾಡಿದನು. ಈ ಸಂಗತಿ ರಾಜನಿಗೆ ತಿಳಿದಾಗ ಅವನು ತುಂಬಾ ಕೋಪಗೊಂಡು ಮಗನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಿದನು.

ಶೋಕತಪ್ತನಾದ ರಾಜಕುಮಾರ ಕಾಡಿನಲ್ಲಿ ಹೆಜ್ಜೆಯಿಡುತ್ತಿದ್ದನು. ಹರಿಣಿ ಅಲ್ಲಿಗೆ ಓಡಿಬಂದು ಅವನನ್ನು ಸ್ವಾಗತಿಸಿತು; ಕೂಡಲೇ ಅದು ಹನ್ನೆರಡು ವರುಷ ವಯಸ್ಸಿನ ಸುಂದರ ತರುಣಿಯ ರೂಪವನ್ನು ಧರಿಸಿತು. ತಾನು ರಾಜ್ಯಭ್ರಷ್ಟನೆಂದೂ, ತನ್ನ ಬಳಿಗೆ ಬಂದರೆ ಅವಳಿಗೂ ಕೆಡುಕಾಗುವುದೆಂದೂ ಅವನು ತಿಳಿಸಿದರೂ ಕಿವಿಗೊಡದೆ ಆ ಜಿಂಕೆ–ಹುಡುಗಿ ಅವನನ್ನು ಹಿಂಬಾಲಿಸಿದಳು. ಸ್ವಲ್ಪ ಹೊತ್ತಿಗೆ ಅವನಿಗೆ ಬಾಯಾರಿಕೆಯಾಯಿತು; ಅಲ್ಲಿ ಸ್ವಲ್ಪವೇ ನೀರಿದ್ದ ಒಂದು ಹೊಂಡವನ್ನು ಕಂಡು ನೀರು ಕುಡಿಯಲು ಬಗ್ಗಿದನು. ಅಲ್ಲೊಂದು ಸರ್ಪವಿತ್ತು; ಅದು ಕಪ್ಪೆಯೊಂದನ್ನು ಕಚ್ಚಿ ಹಿಡಿದಿತ್ತು. ಇನ್ನೂ ಜೀವವಿದ್ದ ಕಪ್ಪೆ 'ಟರ್ ಟರ್ ಟರ್'ಎಂದು ವಟಗುಟ್ಟುತ್ತಿತ್ತು. ಸರ್ಪವನ್ನು ಕೊಲ್ಲುವುದು ಪಾಪಕಾರ್ಯವಾದ್ದರಿಂದಲೂ, ಕಪ್ಪೆಯನ್ನು ಬದುಕಿಸಲು ಅವನು ಮನಸ್ಸು ಮಾಡಿದ್ದರಿಂದಲೂ ಈ ಸಮಸ್ಯೆಯನ್ನು ಬಿಡಿಸಲು ಬೇರೆ ಮಾರ್ಗವನ್ನು ಅನುಸರಿಸಿದನು. ತನ್ನ ಬಲತೋಳಿನಿಂದ ಒಂದಿಷ್ಟು ಮಾಂಸವನ್ನು ಕತ್ತರಿಸಿಕೊಂಡು ಕಪ್ಪೆಗೆ ಬದಲಾಗಿ ಅದನ್ನು ಸರ್ಪಕ್ಕೆ ನೀಡಿದನು. ಸತ್ತು ಬದುಕಿದ ಕಪ್ಪೆ ಸಂತೋಷದಿಂದ ಕುಪ್ಪಳಿಸಿತು. ಜಿಂಕೆ–ಹುಡುಗಿಯೂ ರಾಜಕುಮಾರನೂ ಮುಂದೆ ಇನ್ನೊಂದು ರಾಜ್ಯಕ್ಕೆ ಹೋದರು.

ಆ ನಾಡಿನ ಮುಖ್ಯಪಟ್ಟಣದಲ್ಲಿ ಇವರು ಹೋಗುತ್ತಿದ್ದಾಗ, ಈ ಹುಡುಗಿಯನ್ನು ಕಂಡ ಕ್ಷೌರಿಕನೊಬ್ಬನು ರಾಜನ ಬಳಿಗೆ ಹೋಗಿ, 'ಇಲ್ಲೊಬ್ಬಳು ಚೆಲುವೆಯರ ಚೆಲುವೆ ಇದ್ದಾಳೆ ನೀನು ಅವಳನ್ನು ಖಂಡಿತವಾಗಿಯೂ ನಿನ್ನ ಮನೆಗೆ ಒಪ್ಪಿಸಿಕೊಳ್ಳಬೇಕು' ಎಂದನು. 'ಆದರೆ ಅವಳನ್ನು ಗಂಡನಿಂದ ಬಿಡಿಸುವುದು ಹೇಗೆ ಸಾಧ್ಯ' ಎಂದನು ರಾಜ. 'ಅವನಿಗೆ ಹೇಳಿ ಕಳಿಸು. ನಿನಗೆ ಅವನು ಒಂದು ಬಿಂದಿಗೆ ಹುಲಿಯ ಹಾಲನ್ನು ತಂದು ಕೊಡದಿದ್ದರೆ ಅವನನ್ನು ಶೂಲಕ್ಕೇರಿಸುವುದಾಗಿ ತಿಳಿಸು'ಎಂದನು.

ಮರುದಿವಸ, ರಾಜ ಹುಡುಗನನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಆ ಕೂಡಲೆ ಒಂದು ಬಿಂದಿಗೆ ಹುಲಿಯ ಹಾಲನ್ನು ತಂದುಕೊಡಬೇಕೆಂದೂ ಇಲ್ಲದಿದ್ದರೆ ಶೂಲಕ್ಕೇರಿಸುವುದಾಗಿಯೂ ತಿಳಿಸಿದನು. ಹುಡುಗ ಮುಖವನ್ನು ಕೆಳಗೆ ಹಾಕಿಕೊಂಡು ಮನೆಗೆ ಹೋದನು. ಏಕೆ ಹೀಗೆ ಮಂಕಾಗಿರುವೆ ಎಂದು ವಿಚಾರಿಸಿದಳು. ಅವನು ನಡೆದುದನ್ನು ತಿಳಿಸಿದನು. ಅವಳು, 'ಹೆದರಬೇಡ, ನಿನಗೆ ಹಾಲು ಸಿಕ್ಕುವಂತೆ ಮಾಡುತ್ತೇನೆ ನಿನ್ನ ಬಿಂದಿಗೆಗಳನ್ನು ಎತ್ತಿಕೊಂಡು ಹೋಗಿ ಒಂದು ಹೆಣ್ಣು ಹುಲಿಯನ್ನು ಹುಡುಕು. ಅದು ನಿನ್ನ ಮೇಲೆ ಬಿದ್ದರೆ ಬಲಗೈಯನ್ನು ಎತ್ತು; ನಿನಗೆ ಯಾವ ತೊಂದರೆಯನ್ನೂ ಮಾಡುವುದಿಲ್ಲ' ಎಂದಳು.

ರಾಜಕುಮಾರ ಕಾಡಿನಲ್ಲಿ ಬಲುದೂರ ನಡೆದನು. ಅಲ್ಲಿ ಒಂದು ಸ್ಥಳದಲ್ಲಿ ಹೆಣ್ಣು ಹುಲಿ ತನ್ನೆರಡು ಮರಿಗಳೊಂದಿಗೆ ಮಲಗಿರುವುದನ್ನು ಕಂಡನು. ಮನುಷ್ಯರ ವಾಸನೆ ಬಂತೆಂದು ಹೆಣ್ಣು ಹುಲಿ ಮೇಲೆ ಹಾರಿ ಅವನ ಕಡೆಗೆ ಧಾವಿಸಿತು. ಅವನು ಬಲಗೈಯನ್ನು ಎತ್ತಿದನು. ಅದು, 'ನನ್ನ ಸೋದರಿಯರಲ್ಲಿ ಎಲ್ಲರಿಗಿಂತ ಚಿಕ್ಕವಳ ಮನೆಗೆ ಸೇರಿದವನಿವನು' ಎಂದುಕೊಂಡು ಅಲ್ಲೇ ನಿಂತಿತು. ಅದು ತನ್ನ ಮರಿಗಳಿಗೆ ಹೇಳಿತು, 'ಇವನು ಹಾಲಿಗಾಗಿ ಬಂದಿದ್ದಾನೆ. ನಾವು ಕೊಟ್ಟು ಬಿಡಬೇಕು.' ಹೆಣ್ಣು ಹುಲಿ ತನ್ನ ಪಂಜಗಳಿಂದ ತಾನೇ ಹಾಲನ್ನು ಕರೆದುಕೊಂಡು ಬಿಂದಿಗೆಗಳಲ್ಲಿ ತುಂಬಿ ಹುಡುಗನಿಗೆ ಕೊಟ್ಟಿತು, ಅರಮನೆಯ ತನಕ ಅವನನ್ನು ಸಾಗಿಕಳಿಸಲು ತನ್ನ ಮರಿಗಳೆರಡನ್ನೂ ಕಳಿಸಿಕೊಟ್ಟಿತು. ಅವುಗಳನ್ನು ನೋಡಿದ ಕೂಡಲೇ ರಾಜನಿಗೆ ಭಯವಾಯಿತು.

ಮರುದಿವಸ, ಕ್ಷೌರಿಕ ಮತ್ತೆ ರಾಜನ ಬಳಿಗೆ ಬಂದು ಹೇಳಿದನು, 'ನೀನು ಹೆದರಬಾರದು, ಏನಾದರೂ ಮಾಡಿ ಆ ಹುಡುಗಿಯನ್ನು ನಿನ್ನ ಮನೆಗೆ ಸೇರಿಸಿಕೊಳ್ಳಲೇಬೇಕು.'

'ಸರಿಯೆ, ನಾನೇನು ಮಾಡಬೇಕೆನ್ನುವೆ!' ಎಂದನು ರಾಜ. 'ಅವಳ ಗಂಡನನ್ನು ಧಾನ್ಯವನ್ನು ತರಲು, ರಾಕ್ಷಸರ ಸೀಮೆಗೆ ಕಳಿಸು.'

ರಾಜ ಮತ್ತೆ ಆ ಹುಡುಗನಿಗೆ ಹೇಳಿ ಕಳಿಸಿ, ಕ್ಷೌರಿಕನ ಸಲಹೆಯಂತೆಯೇ ಆಜ್ಞೆ ಮಾಡಿದನು. ಅವನು ಮತ್ತೆ ಕೆಳಮುಖ ಹಾಕಿಕೊಂಡು ಮನೆಗೆ ಬಂದು, ಹೆಂಡತಿಗೆ ಈ ವಿಷಯವನ್ನು ತಿಳಿಸಿದನು. ಅವಳು, 'ಹೆದರ ಬೇಡ. ಅವನು ಕೇಳಿರುವುದಕ್ಕೆ ಎರಡರಷ್ಟು ಧಾನ್ಯ ನಿನಗೆ ದೊರೆಯುವಂತೆ ಮಾಡುತ್ತೇನೆ. ಒಂದು ಕೋಲಿನ ಮೇಲೆ ನಾನು ಸಂದೇಶವನ್ನು ಬರೆದುಕೊಡುತ್ತೇನೆ. ರಾಕ್ಷಸರು ಅದನ್ನು ಕಂಡ ಕೂಡಲೆ ನಿನಗೆ ಮನಃಪೂರ್ವಕವಾಗಿ ಬೇಕಾದಷ್ಟು ಧಾನ್ಯವನ್ನು ಕೊಡುತ್ತಾರೆ' ಎಂದಳು.

ಹುಡುಗ ಕೋಲನ್ನು ಹಿಡಿದುಕೊಂಡು ಕಾಡಿನಲ್ಲಿ ಬಲುದೂರ ನಡೆದು ರಾಕ್ಷಸರ ಸೀಮೆಗೆ ಹೋದನು. ಅಲ್ಲೊಬ್ಬಳು ಮಹಾರಾಕ್ಷಸಿ ಒಂದು ಕಿವಿಯನ್ನು ನೆಲಕ್ಕೆ ಕೊಟ್ಟು, ಇನ್ನೊಂದನ್ನು



ಅಲ್ಲಿಗೆ ಆಗಂತುಕರಾಗಿ ಬರುವವರ ಸಪ್ಪಳವನ್ನು ಗ್ರಹಿಸಲು ಸಿದ್ಧವಾಗಿ ತೆರೆದು ಮಲಗಿದ್ದಳು. ಇವನು ಬರುತ್ತಿರುವುದು ಕಿವಿಗೆ ಬಿದ್ದ ಕೂಡಲೇ ಅವಳು ಥಟ್ಟನೆದ್ದು ನುಂಗಿ ಬಿಡುವೆನೆಂದು ಇವನ ಬಳಿಗೆ ಧಾವಿಸಿದಳು. ಆದರೆ ಅವಳು, ಇವನು ಕೊಟ್ಟ ಕೋಲಿನ ಮೇಲಿದ್ದ ಸಂದೇಶವನ್ನು ಓದಿದ ಮೇಲೆ, ಇವನಿಗೆ ಬೇಕಾದುದನ್ನು ಕೊಟ್ಟುದಲ್ಲದೆ ಇವನನ್ನು ರಾಜನ ಅರಮನೆಯ ತನಕ ಬಿಟ್ಟು ಬನ್ನಿರೆಂದು ತನ್ನ ಕಡೆಯ ಇಬ್ಬರು ರಾಕ್ಷಸರನ್ನೂ ಜೊತೆಗೆ ಕಳಿಸಿದಳು. ಅವರನ್ನು ನೋಡಿದ ಕೂಡಲೇ ರಾಜನಿಗೆ ಕೈಕಾಲುಗಳೇ ಬಿದ್ದು ಹೋದಂತಾಯಿತು. ಅವನು ಮತ್ತೆ ಕ್ಷೌರಿಕನಿಗೆ ಹೇಳಿ ಕಳಿಸಿದನು.

ಕ್ಷೌರಿಕ ಹೇಳಿದನು, 'ಈ ಸಲ ರಾಣಿಯ ಕಂಠಾಭರಣವನ್ನು ಬಾವಿಗೆ ಹಾಕಿ, ಅದನ್ನು ತಂದುಕೊಡು ಎಂದು ಅವನಿಗೆ ಹೇಳು.'

ರಾಜ ತಿರುಗಿ ಹುಡುಗನನ್ನು ಕರೆಸಿಕೊಂಡು, 'ನನ್ನ ರಾಣಿಯ ಕಂಠಾಭರಣ ಬಾವಿಯಲ್ಲಿ ಬಿದ್ದುಹೋಗಿದೆ ಅದನ್ನು ನೀನು ಹುಡುಕಿ ತರದೆ ಹೋದರೆ ನಿನ್ನನ್ನು ಗಲ್ಲಿಗೆ ಹಾಕುತ್ತೇನೆ' ಎಂದನು.

ಇನ್ನೂ ಚಿಕ್ಕವನಾಗಿದ್ದ ರಾಜಕುಮಾರನಿಗೆ ಇದನ್ನು ಕೇಳಿದಾಗ ತುಂಬಾ ಹೆದರಿಕೆಯಾಯಿತು. ರಾಜಾಜ್ಞೆಯನ್ನು ತನ್ನ ಪ್ರಿಯತಮೆಗೆ ತಿಳಿಸಿದನು. ಅವಳಿಗೂ ಏನು ಮಾಡಬೇಕೆಂಬುದು ಹೊಳೆಯಲಿಲ್ಲ. ಆದರೂ ಅವನಿಂದ ಉಪಕೃತರಾಗಿದ್ದ ಕಪ್ಪೆಯೂ ಸರ್ಪವೂ ಸಕಾಲದಲ್ಲಿ ಬಂದು ಬಾವಿಯಲ್ಲಿ ಇಳಿದು ಕಂಠಾಭರಣವನ್ನು ಹುಡುಕಿ ತಂದು ಕೊಟ್ಟವು. ರಾಜಕುಮಾರ ಅದನ್ನು ತೆಗೆದುಕೊಂಡು ಹೋಗಿ ರಾಜನಿಗೆ ಒಪ್ಪಿಸಿದನು.

ಮತ್ತೆ ತನ್ನ ಬಳಿಗೆ ಬಂದ ಕ್ಷೌರಿಕನಿಗೆ ರಾಜ ಹೇಳಿದನು, 'ನಾವು ಇನ್ನು ಮಾಡಬಹುದಾದದ್ದು ಯಾವುದೂ ಇಲ್ಲ. ಹುಡುಗ ನಮ್ಮ ಕೈಗೆ ಸಿಕ್ಕಿ ಬೀಳುವಂಥವನಲ್ಲ; ತುಂಬಾ ಬುದ್ಧಿವಂತ!'

ಆದರೂ ಕ್ಷೌರಿಕ ಮತ್ತೆ ಒತ್ತಾಯ ಮಾಡಿದನು: 'ಇನ್ನೂ ಒಂದು ಸಲ ನೋಡಿ ಬಿಡೋಣ. ಅವನಿಗೆ ಹೇಳಿ ಕಳಿಸಿ, ಫಲಭರಿತವಾದ ಒಂದು ಮಾವಿನ ತೋಪನ್ನು ಒಂದೇ ರಾತ್ರಿಯಲ್ಲಿ ನಿರ್ಮಿಸು ಎಂದು ಆಜ್ಞೆಮಾಡು. ಅವನು ಅದನ್ನು ಮಾಡಲೇ ಆರ ಆಗ ಅವನನ್ನು ನೀನು ಗಲ್ಲಿಗೇರಿಸಬಹುದು.'

'ಭೇಷಾದ ಸಲಹೆ' ಎಂದನು ರಾಜ.

ಈ ಆಜ್ಞೆಯನ್ನು ಕೇಳಿದ ರಾಜಕುಮಾರ ಪೆಚ್ಚುಮೋರೆ ಹಾಕಿಕೊಂಡು ಮನೆಗೆ ಬಂದು ಈ ವಿಷಯವನ್ನು ಅವಳಿಗೆ ತಿಳಿಸಿದನು. ಅವಳು ಹೇಳಿದಳು, 'ಏಳು, ಊಟ ಮಾಡು. ರಾತ್ರಿಯಾಗಲಿ. ನಿನಗಾಗಿ ಒಂದು ಮಾವಿನ ತೋಪನ್ನು ನಿರ್ಮಿಸುತ್ತೇನೆ. ಎರಡು ಪಡಿ ಉಪ್ಪನ್ನೂ, ಒಂದು ಖಡ್ಗವನ್ನೂ ತೆಗೆದುಕೊಂಡು ಬಾ. ಆ ಖಡ್ಗವನ್ನು ಉಪ್ಪು ಹಾಕಿ ತೊಳೆದು ಥಳಥಳ ಹೊಳೆಯುವಂತೆ ಮಾಡು. ನಾನೊಂದು ಜಿಂಕೆಯಾಗಿ ಗ್ರಾಮ ಪ್ರದಕ್ಷಿಣೆ ಮಾಡುತ್ತೇನೆ. ನಾನು ಹಿಂತಿರುಗಿ ಬಂದಾಗ ನನ್ನ ತಲೆಯನ್ನು ಕಡಿದು ಹಾಕು.'

ರಾತ್ರಿಯಾಯಿತು; ಜಿಂಕೆ – ಹುಡುಗಿ ಹೊರಗೆ ಹೋಗಿ ಗ್ರಾಮದ ಸುತ್ತ ಓಡಾಡಿದಳು. ಅವಳು ಹೋದ ಕಡೆಯಲ್ಲೆಲ್ಲ ಫಲಭರಿತವಾದ ಮಾವಿನ ಮರಗಳು ಎದ್ದು ನಿಂತವು. ಅವಳು ತನ್ನ ಬಳಿಗೆ ಹಿಂತಿರುಗಿದಾಗ ಹುಡುಗ ಖಡ್ಗದಿಂದ ಅವಳ ತಲೆಯನ್ನು ಕಡಿದು ಹಾಕಿದನು. ಅವಳಿಗೆ ಮತ್ತೆ ಹೆಣ್ಣಿನ ರೂಪ ಬಂತು. ಬೆಳಗಾಗುವುದರೊಳಗೆ ಎಲ್ಲೆಲ್ಲೂ ಮಾವಿನ ಮರಗಳು ಎದ್ದಿರುವುದು ರಾಜನ ಕಣ್ಣಿಗೆ ಬಿತ್ತು. ಅವನಿಗೆ ಇನ್ನು ಉಸಿರೆತ್ತಲು ಅವಕಾಶವಿರಲಿಲ್ಲ.

ಹಲವು ದಿನಗಳಾದ ಮೇಲೆ, ರಾಜಕುಮಾರ ತನ್ನ ಹೆಂಡತಿಯನ್ನು ಊರಿಗೆ ಕರೆದುಕೊಂಡು ಹೋಗುವುದಾಗಿ ನಿರ್ಧರಿಸಿದನು. ಅವರು ಹಗಲೂ ಇರುಳೂ ಕಾಡಿನಲ್ಲಿ ನಡೆದು ನಡೆದು ಮೊದಲು ಎಲ್ಲಿ ಜಿಂಕೆ ಹುಡುಗಿಯ ರೂಪವನ್ನು ತಾಳಿತ್ತೋ ಅದೇ ಸ್ಥಳಕ್ಕೆ ಬಂದರು. ಆಗ ಹುಡುಗಿ, 'ನಾನು ಈಗ ನನ್ನ ಬಳಗವನ್ನು ಸೇರಿಕೊಳ್ಳಲೇಬೇಕು. ನೀನು ನಿನ್ನ ತಂದೆಯ ಬಳಿಗೆ ಹೋಗು' ಎಂದಳು. ಅವನನ್ನು ಅಪ್ಪಿಕೊಂಡಳು. ಕೂಡಲೇ ಅವಳಿಗೆ ಜಿಂಕೆಯ ರೂಪವೊದಗಿತು. ಜಿಂಕೆ ಕಾಡಿಗೆ ಹೋಯಿತು. ರಾಜಕುಮಾರ ಏಕಾಕಿಯಾಗಿ ತನ್ನ ತಂದೆಯ ಮನೆಗೆ ಹೋದನು.

## ಲಕ್ಷ್ಮಿ, ಸರಸ್ವತಿ

ನೇಕಾರನನ್ನು ಕಂಡರೆ ದಡ್ಡನೆಂದು ಗೇಲಿಮಾಡುವುದು ಭಾರತದ ಹಳ್ಳಿಗಳಲ್ಲಿರುವ ಒಂದು ಹಳೆಯ ರೂಢಿ. ಅವನ ವಿಷಯವಾಗಿ ಅನೇಕ ಕಥೆಗಳಿವೆ. ಬಸ್ತಾರಿನ ಮುರಿಯರು ಹೇಳಿದ ಈ ಕಥೆಯಲ್ಲಿ ಒಬ್ಬ ನೇಕಾರ ಈ ಅಪವಾದವನ್ನು ಹೋಗಲಾಡಿಸಿದ್ದಾನೆ.

ಲಕ್ಷ್ಮಿಯೂ ಸರಸ್ವತಿಯೂ ದಾರಿಯಂಚಿನಲ್ಲಿ ಒಬ್ಬರಿಗೊಬ್ಬರು ಸಿಕ್ಕಿ ತಮ್ಮಲ್ಲಿ ಯಾರು ಹೆಚ್ಚು ಎಂದು ಜಗಳ ಕಾಯುತ್ತಿದ್ದರು. ಹಾಗೆಯೇ ಕಚ್ಚಾಡುತ್ತಾ ಒಂದು ಪಟ್ಟಣಕ್ಕೆ ಬಂದರು. ಆ ಪಟ್ಟಣದ ತುಂಬಾ ಕಳ್ಳರಿದ್ದರು; ಇವರು ಬಂದ ದಿನವೇ ಒಬ್ಬ ಕಳ್ಳ ರಾಜನ ಕುದುರೆಯನ್ನೇ ಕದ್ದನು. ಕಳ್ಳನನ್ನು ಪತ್ತೆಹಚ್ಚುವುದು ಯಾರಿಗೂ ಸಾಧ್ಯವಾಗಲಿಲ್ಲ. ರಾಜ ತಾನೇ ಹುಡುಕುವುದಾಗಿ ಹೇಳಿ ಸಾಮಾನ್ಯ ಪ್ರಜೆಯೊಬ್ಬನ ವೇಷವನ್ನು ಧರಿಸಿ ಹೊರಗೆ ಹೊರಟನು.

ರಾತ್ರಿಯಾಯಿತು; ಮಳೆಯೂ ಬಂತು. ವೇಷಧಾರಿಯಾಗಿದ್ದ ರಾಜ ಒಬ್ಬಾನೊಬ್ಬ ನೇಕಾರನ ಜಗುಲಿಯ ಮೇಲೆ ಹೋಗಿ ಕುಳಿತನು. ನೀರನ್ನು ಚೆಲ್ಲಲು ಹೊರಗೆ ಬಂದ ನೇಕಾರನ ಹೆಂಡತಿ ಇವನನ್ನು ನೋಡಿ, 'ಒಬ್ಬ ಕಳ್ಳ ಬಂದು ಜಗುಲಿಯ ಮೇಲೆ ಅವಿತುಕೊಂಡಿದ್ದಾನೆ' ಎಂದು ಬೊಬ್ಬೆಹಾಕಿದಳು. ಬೀದಿಯ ಜನವೆಲ್ಲ ಓಡಿಬಂದರು,

ರಾಜನನ್ನು ಚೆನ್ನಾಗಿ ಹೊಡೆದರು. ರಾಜ ಕೂಗಿಕೊಂಡನು, 'ನಾನು ಕಳ್ಳನಲ್ಲ, ನಿಮ್ಮ ರಾಜ!'

ಅವನನ್ನು ಕಂಡು ಎಲ್ಲರಿಗೂ ನಗೆ ಬಂತು. ಕೇಳಿದರು, 'ನಮ್ಮ ರಾಜ ಎಲ್ಲಾದರೂ ಹೀಗೆ ಬೀದಿಯಲೆಯುತ್ತಾನೆಯೆ? ಅವನು ಸಿಂಹಾಸನದ ಮೇಲೆ ಕೂರುತ್ತಾನೆ!'

ಅವನಿಗೆ ಒದೆ ಬೀಳುತ್ತಲೇ ಇತ್ತು; ಒಂದು ಕಾಲು ಮುರಿಯಿತು. ಆ ನೇಕಾರ ಅವನನ್ನು ಎಳೆದುಕೊಂಡು ಹೋಗಿ ಬೀದಿಗೆಸೆದನು.

ರಾಜನು ನೋವಿನಿಂದ ನರಳುತ್ತಾ ಬಿದ್ದಿದ್ದಾಗ, ಲಕ್ಷ್ಮಿ, ಸರಸ್ವತಿ ಗಟ್ಟಿಯಾಗಿ ಅರಚುತ್ತಾ ಅಲ್ಲಿಗೆ ಬಂದರು. ಇದೇನು ಸಮಾಚಾರವೋ ತಿಳಿಯೋಣವೆಂದು ನಿಂತರು. ರಾಜ ಅವರಿಗೆ ನಡೆದ ಸಂಗತಿಯನ್ನು ತಿಳಿಸಿದನು. ಅವರ ಜಗಳವೇ ಅವರಿಗೆ ಸಾಕಾಗಿತ್ತು; ಇವನ ಕಷ್ಟವನ್ನು ಕಟ್ಟಿಕೊಂಡು ಅವರಿಗೇನು? ಇಷ್ಟು ಹೇಳಿದರು, 'ನೀನು ರಾಜನಾಗಿದ್ದರೆ ನಮ್ಮ ಜಗಳವನ್ನು ಇತ್ಯರ್ಥಮಾಡು. ನಮ್ಮಿಬ್ಬರಲ್ಲಿ ಯಾರು ಹೆಚ್ಚು, ಹೇಳು.'

ರಾಜ ತನಗಾದ ಅಪಾಯವನ್ನೇ ಚಿಂತಿಸುತ್ತಿದ್ದನು; ಮತ್ತು ಇವರಿಬ್ಬರಲ್ಲಿ ಯಾರಿಗೂ ವಿರೋಧವಾಗಬಾರದು ಎಂದುಕೊಂಡನು. 'ನನ್ನ ಅಭಿಪ್ರಾಯದಲ್ಲಿ ನೀವು ಸಮಾನರು' ಎಂದನು.

ಲಕ್ಷ್ಮಿ ನುಡಿದಳು, 'ಇದು ತೀರ್ಮಾನವೇ ಅಲ್ಲ. ಇಲ್ಲಿ ನೋಡು. ನಮ್ಮಿಬ್ಬರಲ್ಲಿ ಯಾರು ಈ ರಾಜನ ಮುರಿದ ಕಾಲನ್ನು ಸರಿಪಡಿಸುವರೋ ಅವರೇ ಹೆಚ್ಚು.'

ಲಕ್ಷ್ಮಿ ಮೂಟೆಗಟ್ಟಳೆ ಚಿನ್ನಬೆಳ್ಳಿಗಳನ್ನು ತಂದು ರಾಜನ ಕಾಲಿನ ಸುತ್ತ ಸುರಿದಳು; ಇದರಿಂದ ಆದದ್ದು ಇಷ್ಟೇ – ನೋವು ಹೆಚ್ಚಿತು. ಸರಸ್ವತಿ ಆಗ ಮರದ ಪಟ್ಟಿಗಳನ್ನು ತಂದು ಅದಕ್ಕೆ ಕಟ್ಟಿ ಅದ್ಭುತ ಮೂಲಿಕೆಗಳನ್ನು ಕಾಡಿನಿಂದ ತಂದು ಅರೆದು ಲೇಪಿಸಿ, ಅದನ್ನು ಸರಿಪಡಿಸಿದಳು. ರಾಜನಿಗೆ ಎದ್ದು ಓಡಾಡುವುದು ಸಾಧ್ಯವಾಯಿತು.

ಸರಸ್ವತಿ ನುಡಿದಳು, 'ಆದ್ದರಿಂದ ನಾನು ಹೆಚ್ಚು.'

ಲಕ್ಷ್ಮಿ ಹೇಳಿದಳು, 'ಒಬ್ಬ ಮನುಷ್ಯನ ಕಾಲನ್ನು ಸರಿಪಡಿಸಿದ್ದೇನು ದೊಡ್ಡ ವಿಷಯ! ಈಗಲೂ ನಾನೇ ಹೆಚ್ಚು.'

'ನೋಡೋಣ' ಎಂದಳು ಸರಸ್ವತಿ.

ಅವರು ಮುಂದೆ ಹೋಗುತ್ತಾ ಒಬ್ಬ ಬಡ ನೇಕಾರ ಯುವಕನ ಮನೆಗೆ ಬಂದರು; ತುಂಬಾ ಬಡವ; ಮೈ ಎಲುಬು ಚಕ್ಕಳವಾಗಿತ್ತು. ತಿನ್ನಲು ಅವನ ಬಳಿ ಇದ್ದದ್ದು – ಕೆಲವೆ ಗೆಡ್ಡೆ ಗೆಣಸುಗಳು, ನಾಯಿಕೊಡೆಗಳು. ಲಕ್ಷ್ಮಿ ಹೇಳಿದಳು, 'ದರಿದ್ರ ನೇಕಾರನನ್ನು ನೋಡು. ಇವನಿಗಿಂತ ನಿರ್ಭಾಗ್ಯರು ಯಾರಿದ್ದಾರೆ? ಇವನಿಗಿಂತ ಕೀಳು ಜಾತಿಯವರು, ತಿರಸ್ಕೃತರು ಯಾರಿದ್ದಾರೆ? ಇವನಿಗೆ ನಾನು ರಾಜನ ಮಗಳನ್ನು ಕೊಟ್ಟು ಮದುವೆ ಮಾಡಿಸಿದರೆ, ನಿನಗಿಂತ ನಾನೇ ಹೆಚ್ಚು ಎಂಬುದನ್ನು ಒಪ್ಪಿಕೊಳ್ಳುವೆಯಾ?'

'ಖಂಡಿತವಾಗಿ' ಎಂದಳು ಸರಸ್ವತಿ. ಅವಳ ಮಾತಿಗೆ ಇವಳಿಗೆ ನಗೆ ಬಂತು. ಈ ನೇಕಾರ ತನ್ನ ತೋಟದಲ್ಲಿ ಮುಸುಕಿನ ಜೋಳವನ್ನು ಬಿತ್ತಿದ್ದನು. ಲಕ್ಷ್ಮಿ ತನ್ನ ಮಾಯೆಯಿಂದ ಇವುಗಳಲ್ಲಿ ಒಂದೊಂದೂ ನಾಲ್ಕು ತೆನೆಗಳನ್ನು ಕೊಡುವಂತೆಯೂ, ಒಂದೊಂದೂ ಕಾಳೂ ಚಿನ್ನವಾಗುವಂತೆಯೂ ಮಾಡಿದಳು. ಕಾಲಕ್ರಮೇಣ ಧಾನ್ಯವನ್ನು ಕೊಳ್ಳಲು ಇವನ ಮನೆಗೆ

ಬಂದ ವರ್ತಕರಿಗೆ ಈ ದಡ್ಡ ಒಂದು ಪೈಸೆಗೆ ಐದು ತೆನೆಗಳನ್ನು ಮಾರಿದನು. ಅದನ್ನು ಊರಿಗೆ ಕೊಂಡು ಹೋಗಿ ಅವರು ನೋಡುತ್ತಾರೆ; ಅದಷ್ಟೂ ಚಿನ್ನ! ಅದನ್ನು ಇಟ್ಟುಕೊಳ್ಳಲು ಅವರಿಗೆ ಭಯವಾಯಿತು; ರಾಜನಿಗೆ ಉಡುಗೊರೆಯಾಗಿ ಕೊಟ್ಟರು. ಚಿನ್ನದ ತೆನೆಗಳನ್ನು ಕಂಡ ರಾಜ, ನೇಕಾರನಿಗೆ ಹೇಳಿಕಳಿಸಿ ಕರೆಸಿಕೊಂಡು, 'ನಿನ್ನ ತೋಟದಲ್ಲಿರುವ ಮುಸುಕಿನ ಜೋಳವಷ್ಟನ್ನೂ ನನಗೆ ಕೊಡು, ನಿನಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ' ಎಂದನು.

ಅವನು ತನ್ನ ಫಸಲಷ್ಟನ್ನೂ ರಾಜನಿಗೆ ಒಪ್ಪಿಸಿದನು; ಪ್ರತಿಫಲವಾಗಿ ಬಂದ ರಾಜಕುಮಾರಿಯನ್ನು ಮದುವೆಯಾದನು. ಆ ಪಟ್ಟಣದಲ್ಲಿದ್ದ ಒಂದು ಅನುಕೂಲವಾದ ಮನೆಯಲ್ಲಿ ಈ ಗಂಡ–ಹೆಂಡತಿ ಸಂಸಾರ ಹೂಡಿದರು. ಇಷ್ಟಾದರೂ ನೇಕಾರ ತನ್ನ ಕಣ್ಣಿಗೆ ಯಾವ ಭಾಗ್ಯವಸ್ತು ಬಿದ್ದರೂ, ತಾನು ಇನ್ನೂ ನೇಯುತ್ತಿರುವೆನೆಂದೇ ಭಾವಿಸಿ ಕೈಯಾಡಿಸುತ್ತಾ 'ಟಕ್‌ರಸ್–ಟಕ್‌ರಸ್' ಎಂದು ಪಠಿಸುತ್ತಿದ್ದನು. ಇವನ ಚರ್ಯೆಯಿಂದ ಬೇಸತ್ತ ಹೆಂಡತಿ, 'ಈಗ ನೀನು ರಾಜನ ಅಳಿಯ; ಆಸ್ಥಾನಕ್ಕೆ ಹೋಗಿ ನಿನ್ನ ಕರ್ತವ್ಯವೇನೆಂಬುದನ್ನು ತಿಳಿಯಬೇಕು' ಎಂದು ಎಚ್ಚರಿಸಿದಳು. ಅವಳು 'ನಾಳೆ ಇವನು ಆಸ್ಥಾನಕ್ಕೆ ಹೋಗದಿದ್ದರೆ, ನಾನೇ ಇವನನ್ನು ಕೊಲ್ಲುತ್ತೇನೆ, – ಇಂಥ ಗಂಡನಿಲ್ಲದಿದ್ದರೂ ಸರಿಯೆ' ಎಂದುಕೊಂಡಳು.

ಆಗ ಸರಸ್ವತಿ ಲಕ್ಷ್ಮಿಗೆ ಹೇಳಿದಳು, 'ಭಲಾ! ನೀನು ಇವನಿಗೆ ರಾಜಕುಮಾರಿಯನ್ನೇ ಕೊಡಿಸಿ ಮದುವೆ ಮಾಡಿಸಿದ್ದೀಯೆ. ಅದರಿಂದ ಅವನಿಗೆ ಆದ ಅನುಕೂಲವೇನು? ಅವನ ಕೈಲಾಗುವುದಿಷ್ಟೇ – 'ಟಕ್‌ರಸ್–ಟಕ್‌ರಸ್' ಎಂದು ಪಠಿಸುವುದು, ಲಾಳಿ ಎಲ್ಲಿ ಹೋಯಿತೆಂದು ಹುಡುಕುವುದು. ನಾಳೆ ಅವನಿಗೆ ಕಾದಿದೆ ಸಾವು.'

ಲಕ್ಷ್ಮಿ ಹೇಳಿದಳು, 'ಸರಿಯೆ, ಇವನನ್ನು ಯಾರು ಉಳಿಸುತ್ತಾರೆಯೋ ಅವರೇ ನಮ್ಮಿಬ್ಬರಲ್ಲಿ ಹೆಚ್ಚು ಎಂದು ಒಪ್ಪೋಣ. '

ಸರಸ್ವತಿ ಒಪ್ಪಿದಳು. ಕೂಡಲೆ ಅವನ ಬಳಿಗೆ ಹೋಗಿ ಅವನ ಮೆದುಳಿನಲ್ಲಿ ಜ್ಞಾನವನ್ನು ತುಂಬಿದಳು. ಮಾರನೆಯ ದಿನ ಅವನು ಬೆಳಗಾಗುತ್ತಲೇ ಎದ್ದು ಸ್ನಾನ ಮಾಡಿ, ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸಿ ಆನಂತರ ಆಸ್ಥಾನಕ್ಕೆ ಹೋದನು. ಕಡೆಗಾದರೂ ತನ್ನ ಗಂಡನಿಗೆ ಸ್ವಲ್ಪ ತಿಳಿವಳಿಕೆ ಬಂತೆಂದು ಅವನ ಹೆಂಡತಿಗೆ ತುಂಬಾ ಸಂತೋಷವಾಯಿತು. ಇದಾದ ಮೇಲೆ ನೇಕಾರ ದಿನವೂ ಆಸ್ಥಾನಕ್ಕೆ ಹೋಗಿ ಬರುತ್ತಿದ್ದನು. ಕಾಲಕ್ರಮೇಣ ರಾಜನೀತಿವಿಶಾರದವನಾದನು; ರಾಜ ಅವನನ್ನು ಮಂತ್ರಿ ಪದವಿಗೆ ನೇಮಿಸಿದನು.

ಲಕ್ಷ್ಮಿ,ಸರಸ್ವತಿ ಮತ್ತೆ ಬಂದು ಬಳಿ ಸೇರಿದರು. ಲಕ್ಷ್ಮಿ ನಕ್ಕು ನುಡಿದಳು, 'ನೀನೇನೋ ಆ ಬಡಪ್ರಾಣಿಯನ್ನು ಮಂತ್ರಿ ಪದವಿಗೇರಿಸಿದೆ, ಅವನನ್ನು ಉಳಿಸಿದೆ. ಆದರೆ ನಾನು ಅವನನ್ನು ಅಲ್ಲಿಂದ ಉರುಳಿಸಬಲ್ಲೆನಾದರೆ, ನಮ್ಮಿಬ್ಬರಲ್ಲಿ ಯಾರು ಹೆಚ್ಚು ಎಂದಾಗುತ್ತದೆ.'

ಸರಸ್ವತಿ ಹೇಳಿದಳು, 'ಆಗ ನೀನೇ ಹೆಚ್ಚು ಎನ್ನುವುದಕ್ಕೆ ಅಭ್ಯಂತರವೇ ಇರದು! ಲಕ್ಷ್ಮಿ ಅದೇ ಊರಿನಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣನೊಬ್ಬನನ್ನು ಕಂಡು ಅವನಿಗೆ ಬೇಕಾದಷ್ಟು ಚಿನ್ನಬೆಳ್ಳಿಗಳನ್ನು ಕೊಟ್ಟಳು. ಆ ಬ್ರಾಹ್ಮಣ ರಾಜನ ಸಮ್ಮುಖಕ್ಕೆ ಹೋಗಿ, 'ಮಹಾರಾಜ, ನೀನು ವಿಖ್ಯಾತ ಹಿಂದೂ ರಾಜನಾಗಿದ್ದೀಯೆ, ಆದರೆ ನಿನ್ನ ಮಗಳನ್ನು ಹೀನಕುಲದ

ನೇಕಾರನೊಬ್ಬನಿಗೆ ಕೊಟ್ಟು ಮದುವೆ ಮಾಡಿದೆ. ನಾವು ಅದನ್ನೂ ಆಕ್ಷೇಪಿಸಲಿಲ್ಲ. ಈಗ ಅವನನ್ನು ನೀನು ನಿನ್ನ ಮಂತ್ರಿ ಪದವಿಯಲ್ಲಿ ಕೂರಿಸಿದ್ದೀಯೆ. ಇದನ್ನು ಕಂಡು ಎಲ್ಲರೂ ನಿನ್ನನ್ನು ಲಘುವಾಗಿ ಪರಿಗಣಿಸುತ್ತಿದ್ದಾರೆ ನೀನು ಅವನನ್ನು ಆ ಪದವಿಯಿಂದ ಕೆಳಗಿಳಿಸಿ ಬೇರೊಬ್ಬನನ್ನು ನೇಮಿಸು!' ಎಂದನು.

ರಾಜ ಹೇಳಿದನು, 'ಅವನನ್ನು ಹೊರಗೆ ಹಾಕುವುದು ಹೇಗೆ ಸಾಧ್ಯ? ತನ್ನ ಕೆಲಸವನ್ನು ಅವನು ಚೆನ್ನಾಗಿ ಮಾಡುತ್ತಿದ್ದಾನೆ!'

ಅದಕ್ಕೆ ಬ್ರಾಹ್ಮಣ ಹೇಳಿದನು, 'ಅವನು ಅಷ್ಟು ದಕ್ಷನಾಗಿದ್ದರೆ, ಅವನಿಗೆ ಇದನ್ನು ಹೇಳು – 'ಮಂತ್ರಿವರ್ಯನೆ, ನೀನೊಬ್ಬ ನೇಕಾರ; ನೆಯ್ಗೆಯಲ್ಲಿ ನಿನ್ನ ಕೌಶಲವನ್ನು ಅಲ್ಲಗಳೆಯುವಂತಿಲ್ಲ ಸಾಧಾರಣ ನೇಕಾರರು ನೆಯ್ದ ಬಟ್ಟೆಯನ್ನು ಉಡುವುದೆಂದರೆ ನನಗಾಗದು. ದೇವಾಲಯಕ್ಕೆ ಪೂಜೆಗೆ ಹೋಗುವಾಗ ಧರಿಸಲು ನನಗೊಂದು ಜೇಡರ ಬಲೆಯಿಂದ ಮಾಡಿದ ವಸ್ತ್ರ ಬೇಕಾಗಿದೆ ಒಂದು ತಿಂಗಳ ಅವಧಿಯಲ್ಲಿ ನಿನಗೆ ಅವನು ಅಂಥಾ ಬಟ್ಟೆಯನ್ನು ತಂದು ಕೊಟ್ಟರೆ ಸರಿ; ಇಲ್ಲವಾದರೆ ಅವನನ್ನು ಗಲ್ಲಿಗೆ ಹಾಕು!'

ಈ ಉಪದೇಶಕ್ಕೆ ಕಿವಿಗೊಟ್ಟ ರಾಜ, ಮಂತ್ರಿ ತನ್ನನ್ನು ನೋಡಬಂದಾಗ ಜೇಡರ ಬಲೆಯಿಂದ ಮಾಡಿದ ವಸ್ತ್ರವನ್ನು ಅವನು ತಂದುಕೊಡಬೇಕೆಂದನು. ನಿರ್ಭಾಗ್ಯ ನೇಕಾರ ತನ್ನ ಮನೆಗೆ ಹಿಂದಿರುಗಿ ಹೆಂಡತಿಗೂ ಮಕ್ಕಳಿಗೂ ಈ ಸಂಗತಿಯನ್ನು ತಿಳಿಸಿದನು ಅವರಿಗೆ ತುಂಬಾ ಹೆದರಿಕೆಯಾಯಿತು; ಕೊರಗು ಹಿಡಿದು ಕೃಶವಾದರು ಆ ಮಕ್ಕಳಲ್ಲಿ ಅತಿ ಕಿರಿಯನಾದವನು ಎಂದುಕೊಂಡನು, 'ಇವರೆಲ್ಲರೂ ಸತ್ತರೆ, ನಾನೂ ಸಾಯುತ್ತೇನೆ ಇಲ್ಲಿಂದ ಓಡಿಹೋಗುವುದೇ ಉತ್ತಮ.' ಸ್ವಲ್ಪ ತಿಂಡಿಯನ್ನು ಕಟ್ಟಿಕೊಂಡು, ಒಂದು ಛತ್ರಿಯನ್ನು ಹಿಡಿದುಕೊಂಡು ಅವನು ಓಡುತ್ತಾ ಹೋಗಿ ಇನ್ನೊಂದು ಪಟ್ಟಣಕ್ಕೆ ಬಂದನು. ಅಲ್ಲೊಬ್ಬ ವರ್ತಕನಲ್ಲಿ ಆಶ್ರಯಪಡೆದನು. ಅವನಿಗೆ ಒಬ್ಬಳೇ ಮಗಳು. ವರ್ತಕ ಶ್ರೀಮಂತನಾಗಿದ್ದನು; ಅವನ ಬಳಿ ಅರುವತ್ತು ನೇಗಿಲುಗಳಿದ್ದವು. ಈ ಹುಡುಗ ಅವನೊಂದಿಗೆ ಹೊಲದ ಕಡೆಗೆ ಹೋದನು; ಅಲ್ಲಿ ಒಂದು ತೊರೆಯನ್ನು ದಾಟುವಾಗ ತನ್ನ ಪಾದರಕ್ಷೆಗಳನ್ನು ಮೆಟ್ಟಿಕೊಂಡೇ ದಾಟಿದನು. ಒಣನೆಲದ ಮೇಲೆ ಹೆಜ್ಜೆ ಹಾಕುವಾಗ ಅವುಗಳನ್ನು ತನ್ನ ಕೈಗಳಲ್ಲಿ ಹಿಡಿದುಕೊಂಡನು. ಮಳೆ ಬೀಳುತ್ತಿದ್ದಾಗ ಛತ್ರಿಯನ್ನು ಮುಚ್ಚುತ್ತಿದ್ದನು; ಮರದ ನೆರಳಿಗೆ ಬಂದಾಗ ಅದನ್ನು ಬಿಚ್ಚಿ ಹಿಡಿಯುತ್ತಿದ್ದನು.

ಒಂದು ದಿನ ವರ್ತಕ ತನ್ನ ಹೊಲದ ಬಳಿ ಕುಳಿತು ಆಳುಗಳು ಬೀಜವನ್ನು ಬಿತ್ತುತ್ತಿದ್ದುದನ್ನು ನೋಡುತ್ತಾ ಇದ್ದನು. ಹುಡುಗ ಅವನ ಬಳಿಗೆ ಹೋಗಿ, 'ಚಿಕ್ಕಪ್ಪ ಆ ನೇಗಿಲುಗಳೂ ಎತ್ತುಗಳೂ ನಿನ್ನವೇ? ಇಷ್ಟು ಅಸಾಧ್ಯವಾದ ಬೆಳೆಯ ಹೊಟ್ಟನ್ನು ನೀವು ಎಷ್ಟು ತೊಟ್ಟಿಗಳಲ್ಲಿ ತುಂಬಬಲ್ಲಿರಿ?' ಎಂದನು. ವರ್ತಕನಿಗೆ ಪ್ರಶ್ನೆ ಅರ್ಥವಾಗಲಿಲ್ಲ. ಹುಡುಗ ಇದನ್ನೇ ಮತ್ತೆ ಮತ್ತೆ ಕೇಳಿದ್ದರಿಂದ ಅವನಿಗೆ ಸಿಟ್ಟು ಬಂತು; ಮನೆಗೆ ಹೋದನು. ಮನೆಯಲ್ಲಿ ಅವನ ಮಗಳು ಅವನಿಗೆ ಊಟವಿಟ್ಟು ಅಡುಗೆಮನೆಗೆ ಹೋಗುತ್ತಿದ್ದಾಗ, ವರ್ತಕ ಗಟ್ಟಿಯಾಗಿ ನಗತೊಡಗಿದನು. ಹುಡುಗಿ ಥಟ್ಟನೆ ಓಡಿ ಬಂದು ಕೇಳಿದಳು, 'ಊಟಮಾಡುವ ಸಮಯದಲ್ಲಿ ನೀವೆಂದೂ ನಕ್ಕಿರಲಿಲ್ಲ. ಈಗೇಕೆ ನಗುತ್ತಿದ್ದೀರಿ?' ಅವನು ಉತ್ತರ ಕೊಡಲಿಲ್ಲ;



ಅವಳು ಅವನ ತಣಿಗೆಯನ್ನು ಕಿತ್ತುಕೊಂಡು ನಕ್ಕದ್ದಕ್ಕೆ ಕಾರಣವನ್ನು ತಿಳಿಸುವ ತನಕ ಊಟಕ್ಕೆ ಬಡಿಸುವುದೇ ಇಲ್ಲವೆಂದಳು. ಆಗ ಅವನು ಈ ದಡ್ಡ ಹುಡುಗನ ಕಥೆಯನ್ನು ಅವಳಿಗೆ ಹೇಳಿದನು, 'ಅವನು ಎಂಥಾ ದಡ್ಡ ಹುಡುಗ; ನಗೆಯನ್ನು ತಡೆಯುವುದಕ್ಕೇ ಆಗಲಿಲ್ಲ' ಎಂದನು. ಅವಳು ಹೇಳಿದಳು: 'ಅವನನ್ನು ಇಲ್ಲಿಗೆ ಕರೆಸಿ; ನಾನು ನಕ್ಕುಬಿಡುತ್ತೇನೆ ಹಾಗೆ ಮಾಡದಿದ್ದರೆ ನಿಮಗೆ ಅನ್ನ ದೊರೆಯದು!'

ವರ್ತಕನಿಗೆ ತುಂಬಾ ಹಸಿವಾಗಿತ್ತು; ಅವನು ಹುಡುಗನನ್ನು ಕರೆಯಲು ಹೋದನು ಹುಡುಗ ಹೇಳಿದನು, 'ನಾನು ಬರುವುದಿಲ್ಲ. ಹೋಗಿ, ನಿಮ್ಮ ಮಗಳನ್ನು 'ನೀನು ಕಾಯಿಯೋ ಹಣ್ಣೋ?' ಎಂದು ಕೇಳಿ!'

ಅವನು ಮನೆಗೆ ಹೋಗಿ, ಹಾಗೆ ಕೇಳಿದಾಗ, ಮಗಳು 'ಹಣ್ಣು' ಎಂದಳು. ಇನ್ನೊಂದು ಸಲ ಹುಡುಗ, 'ಹೋಗಿ ಕೇಳು, ಗರಿಕೆಗಳು ಬೆಳೆದಿವೆಯೆ, ಇಲ್ಲವೆ? ಎಂದು; ಅವಳು ಕೊಡುವ ಉತ್ತರವನ್ನು ತಿಳಿಸು' ಎಂದನು.

ಹುಡುಗಿ ಹೇಳಿಕಳಿಸಿದಳು, 'ಅವು ಬೆಳೆದಿವೆ.'

ಈ ಉತ್ತರ ಬಂದ ಮೇಲೆ ಹುಡುಗ ಅವರ ಮನೆಗೆ ಹೋದನು. ಆ ಹುಡುಗಿ ಪಡಸಾಲೆಯಲ್ಲಿ ಒಂದು, ಬಾಗಿಲ ಬಳಿ ಒಂದು, ಕೋಣೆಯ ಮಧ್ಯದಲ್ಲಿ ಒಂದು, ಅಡುಗೆ ಮನೆಯಲ್ಲಿ ಒಂದು – ಹೀಗೆ ನಾಲ್ಕು ಕಡೆಗಳಲ್ಲಿ ಊಟಕ್ಕೆ ಎಲೆಹಾಕಿ ಬಡಿಸಿದ್ದಳು. ಮುಂದಾಗಿ ಬಂದು ತಂದೆ ಬಾಗಿಲ ಬಳಿ ಹಾಕಿ ಬಡಿಸಿದ್ದ ಎಲೆಯ ಮುಂದೆ ಕುಳಿತನು. ಹುಡುಗನಾದರೋ ಕೋಣೆಯ ಮಧ್ಯದಲ್ಲಿ ಹಾಕಿದ್ದ ಎಲೆಯ ಮುಂದೆ ಕುಳಿತನು. ಊಟವಾದ ಮೇಲೆ ಹುಡುಗ ಮಲಗಿ ನಿದ್ದೆ ಮಾಡಿದನು. ಆಗ ವರ್ತಕ ಮಗಳಿಗೆ ಹೇಳಿದನು, 'ಆ ಹುಚ್ಚನನ್ನು ನೋಡು. ಪಡಸಾಲೆಯಲ್ಲೇ ಬಡಿಸಿದ ಎಲೆ ಸಿದ್ಧವಾಗಿತ್ತು. ಅದನ್ನು ಬಿಟ್ಟು ಅವನು ಒಳಗೆ ಹೋಗಿ ಕುಳಿತನು.'

ಮಗಳು ತಂದೆಗೆ ಈ ನಡವಳಿಕೆಯ ಅರ್ಥವನ್ನು ವಿವರಿಸಿದಳು: 'ನೀರನ್ನು ದಾಟುವಾಗ ಅವನು ಪಾದರಕ್ಷೆಗಳನ್ನು ಮೆಟ್ಟಿಕೊಂಡೇ ಇದ್ದುದೇಕೆ? ಆಗ ನಿನ್ನ ಕಾಲಿನ ಕೆಳಗೆ ಏನಿರುವುದೋ ಕಾಣುವುದಿಲ್ಲ – ಅದಕ್ಕಾಗಿ. ತೆರೆದ ಹಾದಿಯಲ್ಲಿರುವುದೆಲ್ಲವೂ ಕಾಣುತ್ತದೆ; ಆದ್ದರಿಂದ ಅಲ್ಲಿ ಪಾದರಕ್ಷೆಗಳು ಅನಗತ್ಯ. ಮರದ ಕೆಳಗೆ ಕುಳಿತಿರುವಾಗ ಅವನು ಛತ್ರಿ ಬಿಚ್ಚಿದ್ದೇಕೆ? ಮರದ ಮೇಲಿಂದ ಹಕ್ಕಿಗಳ ಪಿಕ್ಕೆ ತನ್ನ ಮೇಲೆ ಬೀಳದಿರಲೆಂದು, ಅವನು ಯಾವ ಜಾತಿಯವನೆಂದು ಪತ್ತೆ ಮಾಡುವುದಕ್ಕಾಗಿಯೇ ನಾನು ನಾಲ್ಕು ಕಡೆಗಳಲ್ಲಿ ಊಟಕ್ಕೆ ಸಿದ್ಧಪಡಿಸಿದ್ದೆ. ಕೀಳುಜಾತಿಯವನಾಗಿದ್ದರೆ, ಅವನು ಪಡಸಾಲೆಯಲ್ಲಿ ಕೂರುತ್ತಿದ್ದನು, ಉತ್ತಮ ವರ್ಣದವನಾದ್ದರಿಂದ ಅವನು ಒಳಗೆ ಬಂದು ಕೋಣೆಯಲ್ಲಿ ಕುಳಿತು ಊಟಮಾಡಿದನು. ಅವನು ಹೊಟ್ಟೆಬಾಕನಾಗಿದ್ದರೆ ಅಡುಗೆಯ ಮನೆಗೇ ಹೋಗಿ ಕೂರುತ್ತಿದ್ದನು.' ಮಿತಹಾರಿಯೂ, ಒಳ್ಳೆಯ ಮನೆತನಕ್ಕೆ ಸೇರಿದವನೂ, ಜಾಣನೂ ಆದ ಹುಡುಗ ಸಿಕ್ಕಿದ್ದಕ್ಕಾಗಿ ಅವಳು ತುಂಬಾ ಸಂತೋಷಪಟ್ಟಳು. ವರ್ತಕನು ಆಶ್ಚರ್ಯದಿಂದ ನಕ್ಕು ಈ ಹುಡುಗನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂದು ನಿರ್ಧರಿಸಿದನು.

ಮದುವೆಯಾದ ಮೇಲೆ, ಈ ಹುಡುಗನಿಗೆ ತನ್ನ ಮನೆಯವರ ಮತ್ತು ಅವರಿಗೆ ಒದಗಿರುವ ಗಂಡಾಂತರದ ನೆನಪು ಬಂತು. ತನ್ನ ಹೆಂಡತಿಗೆ ನಿದ್ದೆ ಬಂದ ಮೇಲೆ, ತಾನು ಎದ್ದು ಕುಳಿತು ಅವರೆಲ್ಲರ ಬಗೆಗೆ ಯೋಚಿಸುತ್ತಾ ಅಳುತ್ತಿದ್ದನು. ಬೆಳಗಾಗುತ್ತಲೆ ಆ ಹುಡುಗಿ ತಾವು ಮಲಗಿದ್ದ ಚಾಪೆಯನ್ನು ಎತ್ತಿ ನೋಡಿದಾಗ, ನೆಲ ಅವನ ಕಣ್ಣೀರಿಂದ ತೇವವಾಗಿರುವುದನ್ನು ಕಾಣುತ್ತಿದ್ದಳು. ಕೆಲವು ದಿನಗಳು ಕಳೆದ ಮೇಲೆ ಅವಳು ಪ್ರಶ್ನೆಹಾಕಿ ಅವನಿಂದ ವಿವರಗಳನ್ನು ತಿಳಿದುಕೊಂಡಳು; ಮತ್ತು 'ಹೆದರಬೇಡ, ನಾವಿಬ್ಬರೂ ಅಲ್ಲಿಗೆ ಹೋಗಿ, ಅವರ ಕಷ್ಟವನ್ನು ಪರಿಹರಿಸೋಣ' ಎಂದು ಧೈರ್ಯ ಹೇಳಿದಳು.

ಹಾಗೆಯೇ ಇಬ್ಬರೂ ಅಲ್ಲಿಗೆ ಬಂದು, ಅನ್ನ ನೀರು ಬಿಟ್ಟು ಚಿಂತಿಸುತ್ತ ಕೃಶವಾಗಿದ್ದ ಮಂತ್ರಿಯನ್ನು ಅರಮನೆಯಲ್ಲಿ ಕಂಡರು. ಹುಡುಗಿ, 'ಹೆದರಬೇಡಿ. ಸುಖವಾಗಿ ಊಟಮಾಡಿ. ನಾನು ತಕ್ಕ ಏರ್ಪಾಟನ್ನು ಮಾಡುತ್ತೇನೆ. ಈ ರಾಜನಿಗೆ ನಾನು ಜೇಡರಬಲೆಯಿಂದ ನೆಯ್ದ ವಸ್ತ್ರವನ್ನು ತಂದು ಕೊಡುತ್ತೇನೆ' ಎಂದು ಅಭಯ ನೀಡಿದಳು.

ಆಗ ಮಂತ್ರಿಗೆ ಸ್ವಲ್ಪ ಉಸಿರು ಬಂತು; ಆಹಾರವನ್ನು ತೆಗೆದುಕೊಂಡನು. ಮರುದಿವಸ



ಆಸ್ಥಾನಕ್ಕೆ ಹೋದನು. ಸ್ವಲ್ಪ ಹೊತ್ತಿನ ಮೇಲೆ ಅವನ ಸೊಸೆ ಒಂದು ಹೊಸ ಮಣ್ಣಿನ ಬಿಂದಿಗೆಯನ್ನು ತಲೆಯ ಮೇಲೆ ಹೊತ್ತು ತಾನೂ ಅಲ್ಲಿಗೆ ಬಂದಳು. ರಾಜನಿಗೆ ಕೈಮುಗಿದು, ಹೇಳಿದಳು, 'ನೀನು ಜೇಡರಬಲೆಯಿಂದ ಮಾಡಿದ ವಸ್ತ್ರವನ್ನು ತಂದುಕೊಡಬೇಕೆಂದು ನನ್ನ ಮಾವನಿಗೆ ಅಪ್ಪಣೆ ಮಾಡಿರುವೆ; ಹಾಗೆಲ್ಲಾ ಅಂಥಾ ವಸ್ತ್ರವನ್ನು ತಯಾರಿಸುವುದು ಸಾಧ್ಯವಿಲ್ಲ ಇಲ್ಲೊಂದು ಬಿಂದಿಗೆಯಿದೆ. ಅದು ನಿನ್ನ ಉಸಿರಿನಿಂದ ತುಂಬಿ ಹೋಗಿ ಒಡೆದು ಹೋಗುವ ತನಕ ನೀನು ಅದರೊಳಕ್ಕೆ ಉಸಿರನ್ನು ಊದು, ನೋಡೋಣ. ಆ ಕೂಡಲೆ ನಾನು ನೀನು ಕೇಳಿದ ವಸ್ತ್ರವನ್ನು ನೆಯ್ದು ಕೊಡುತ್ತೇನೆ'.

ಇದನ್ನು ಕೇಳಿ ರಾಜನಿಗೆ ಬಲು ಕೋಪ ಬಂತು. 'ನನ್ನ ಉಸಿರಿನಿಂದ ಇಂಥಾ ಬಿಂದಿಗೆಯನ್ನು ಹೇಗೆ ಭರ್ತಿ ಮಾಡಲಿ?' ಎಂದನು.

ಹುಡುಗಿ ತಟ್ಟನೆ ನುಡಿದಳು, 'ಹಾಗಾದರೆ ಜೇಡರಬಲೆಯಿಂದ ನಿನಗೋಸ್ಕರ ಆ ವಸ್ತ್ರವನ್ನು ನಾವು ಹೇಗೆ ನೇಯಬಲ್ಲೆವು?'

ರಾಜ ಮಂತ್ರಿಯ ಕಡೆಗೆ ತಿರುಗಿ ಹೇಳಿದನು, 'ನಾನೀಗ ಮನಸ್ಸು ಬದಲಾಯಿಸಿದ್ದೇನೆ. ನೀನು ವಸ್ತ್ರವನ್ನು ನನಗೆ ತಂದುಕೊಡಬೇಕಾದ್ದಿಲ್ಲ. ನೀನು ನನ್ನ ಆಸ್ಥಾನದಲ್ಲೇ ಇರತಕ್ಕದ್ದು.'

ಆನಂತರ ಮಂತ್ರಿಯೂ, ಅವನ ಸೊಸೆಯೂ ನೆಮ್ಮದಿಯಾಗಿ ಮನೆಗೆ ಹೋದರು. ಇತ್ತಲಾಗಿ ಆ ಬ್ರಾಹ್ಮಣ ರಾಜನ ಬಳಿಗೆ ಬಂದು ಅಂದು ಆಸ್ಥಾನದಲ್ಲಿ ನಡೆದುದನ್ನು ತಿಳಿದುಕೊಂಡನು. ಬ್ರಾಹ್ಮಣ ಹೇಳಿದನು, 'ಆಗಲಿ, ಮಂತ್ರಿ ಈ ಕ್ಷಣದಲ್ಲಿ ಗೆದ್ದಿರಬಹುದು. ಆದರೆ ನೀನು ಇಲ್ಲಿಗೇ ಬಿಡಬಾರದು. ಅವನನ್ನು ಮತ್ತೆ ಪರೀಕ್ಷಿಸಬೇಕು. ಐದು ಪೌಂಡುಗಳಷ್ಟು ಸೊಳ್ಳೆಯ ಮೂಳೆಗಳನ್ನು ತಂದುಕೊಡೆಂದು ಅವನಿಗೆ ಹೇಳು.'

ದುರ್ಬೋಧನೆ ಮಾಡಿದ ಬ್ರಾಹ್ಮಣ ರಾಜನ ಕೈಗೆ ಹಣದ ಥೈಲಿಯನ್ನು ತಗುಲಿಸಿ ಹೊರಟುಹೋದನು.

ರಾಜ ನೇಕಾರನಿಗೆ ಹೇಳಿ ಕಳಿಸಿ, 'ನನಗೆ ಐದು ಸೇರು ಸೊಳ್ಳೆಯ ಮೂಳೆಗಳನ್ನು ತಂದು ಕೊಡು, ಒಂದು ತಿಂಗಳಲ್ಲಿ, ಇಲ್ಲವಾದರೆ ನಿನ್ನನ್ನು ಗಲ್ಲಿಗೇರಿಸುತ್ತೇನೆ' ಎಂದನು.

ಮತ್ತೆ ಈ ಬಡಪಾಯಿಗೆ ಪ್ರಾಣಸಂಕಟ ಬಂತು; ಅನ್ನ ನೀರು ಬಿಟ್ಟು ಯೋಚಿಸುತ್ತ ಕುಳಿತನು. ಆದರೆ ಈ ವಿಷಯ ಸೊಸೆಗೆ ತಿಳಿದಾಗ ಅವಳು, 'ಇದಕ್ಕೆ ಹೆದರ ಬೇಕಾಗಿಲ್ಲ. ನಾನು ಹಿಂದೆ ನಿನ್ನನ್ನು ಉಳಿಸಲಿಲ್ಲವೆ? ಈಗಲೂ ಉಳಿಸುತ್ತೇನೆ' ಎಂದು ಭರವಸೆ ಕೊಟ್ಟಳು.

ಅವನಿಗೆ ಆಗ ಧೈರ್ಯವಾಯಿತು; ಎದ್ದು ಊಟ ಮಾಡಿದನು. ಅವಳ ಸಲಹೆಯಂತೆ ಅವನು ಅರಮನೆಗೆ ಹೋದನು. ಹಿಂದೆಯೇ ಸೊಸೆಯೂ ಅಲ್ಲಿಗೆ ಹೋದಳು; ರಾಜನ ಮುಂದೆ ನಿಂತು ಹೇಳಿದಳು, 'ನಾನು ಸೊಳ್ಳೆಯ ಮೂಳೆಗಳನ್ನು ತಂದಿದ್ದೇನೆ. ಅವುಗಳನ್ನು ತೂಗುವುದಕ್ಕೆ ತಕ್ಕಡಿ ಬೇಕಾಗಿದೆ. ಗಾಳಿಯ ದಂಡಿಗೆಯೂ ಕಾವಿನ ತಾಟುಗಳೂ ಉಳ್ಳ ತಕ್ಕಡಿಯಲ್ಲಿ ಮಾತ್ರ ಅವುಗಳನ್ನು ತೂಕ ಮಾಡಬೇಕು.'

ಇದನ್ನು ಕೇಳಿದ ರಾಜ ಹೇಳಿದನು, 'ಅಂಥಾ ತಕ್ಕಡಿಯನ್ನು ಯಾರು ತರಬಲ್ಲರು?'

ಅದಕ್ಕೆ ಹುಡುಗಿ ತಟ್ಟನೆ ಹೇಳಿದಳು, 'ಐದು ಸೇರು ಸೊಳ್ಳೆಯ ಮೂಳೆಗಳನ್ನು ಯಾರು ತರಬಲ್ಲರು?'

ಆಗ ರಾಜ ಮಂತ್ರಿಗೆ ಹೇಳಿದನು, 'ನಾನು ಕೇಳಿದ್ದನ್ನು ನೀನು ತರಬೇಕಾಗಿಲ್ಲ. ನೀನು ನನ್ನ ಆಸ್ಥಾನದಲ್ಲೇ ಇರಬಹುದು.'

ಮಾವನೂ ಸೊಸೆಯೂ ಮನೆಗೆ ಬಂದರು. ಬ್ರಾಹ್ಮಣ ಮತ್ತೆ ರಾಜನ ಬಳಿಗೆ ಬಂದನು. ರಾಜ ನಡೆದುದೆಲ್ಲವನ್ನೂ ಅವನಿಗೆ ತಿಳಿಸಿದನು. ಬ್ರಾಹ್ಮಣ ಹೇಳಿದನು. 'ಈ ಹುಡುಗಿ ತುಂಬಾ ಬುದ್ಧಿವಂತೆ. ಆದರೆ ಈಗ ನಿನ್ನ ಮಂತ್ರಿಗೆ ಹೇಳು, 'ನಿನ್ನ ಮನೆಯಲ್ಲಿ ಒಂದು ಬಾವಿಯನ್ನು ತೋಡಿ, ಆ ಬಾವಿಯನ್ನು ವರ್ತಕರೆಲ್ಲರ ಪ್ರಯೋಜನಕ್ಕಾಗಿ ಅಂಗಡಿಬೀದಿಯ ಮಧ್ಯದಲ್ಲಿ ತಂದು ಹಾಕು' ಎಂದು!'

ಬ್ರಾಹ್ಮಣ ಮತ್ತೆ ರೂಪಾಯಿಗಳನ್ನು ತುಂಬಿದ ಥೈಲಿಯನ್ನು ರಾಜನ ಕೈಗೆ ಹಾಕಿ ಹೊರಟುಹೋದನು. ಮತ್ತೆ ರಾಜ ಮಂತ್ರಿಯನ್ನು ಕರೆಸಿಕೊಂಡು ಹಾಗೆಯೇ ಆಜ್ಞೆ ಮಾಡಿ,

'ಇನ್ನೊಂದು ತಿಂಗಳಲ್ಲಿ ನೀನು ಈ ಕೆಲಸವನ್ನು ಮಾಡದಿದ್ದರೆ ನಿನ್ನನ್ನು ಗಲ್ಲಿಗೇರಿಸುತ್ತೇನೆ' ಎಂದನು.

ಮಂತ್ರಿ ಸಪ್ಪೆಮೋರೆ ಹಾಕಿಕೊಂಡು ಮನೆಗೆ ಬಂದನು; ಅನ್ನ ನೀರು ಬಿಟ್ಟು ಕೊರಗುತ್ತಿದ್ದನು. ಆಗ ಅವನ ಸೊಸೆ ಹೇಳಿದಳು, 'ಇದು ಸಣ್ಣ ವಿಷಯ. ಯೋಚನೆ ಮಾಡಬೇಡಿ. ಈ ಸಲವೂ ನಿಮ್ಮನ್ನು ಉಳಿಸುತ್ತೇನೆ.'

ಆದರೆ ಅವನು ಹೇಳಿದನು, 'ಹಾಗಲ್ಲ, ಇದು ನಿಜವಾಗಿಯೂ ಭಯಂಕರವಾದ ಕೆಲಸ.'

ಇವನು ಹೊಟ್ಟೆ ತುಂಬ ಊಟ ಮಾಡಲೂ ಇಲ್ಲ; ಹುಡುಗಿಯ ಮಾತಿಗೆ ಕಿವಿಗೊಡಲೂ ಇಲ್ಲ. ತನ್ನ ಮನೆಯ ಅಂಗಳದಲ್ಲಿ ಒಂದು ಬಾವಿಯನ್ನು ತೋಡಿದನು. ಅದು ಸಿದ್ಧವಾದ ಕೂಡಲೆ ಆಸ್ಥಾನಕ್ಕೆ ಹೋದನು. ಅವಳೂ ಮೈ ಕೈಗೆಲ್ಲಾ ಮಣ್ಣು ಸುರಿದುಕೊಂಡು, ಒಂದು ಬಲವಾದ ಹಗ್ಗವನ್ನು ಹಿಡಿದುಕೊಂಡು ಅವನ ಹಿಂದೆಯೆ ಅಲ್ಲಿಗೆ ಹೋದಳು. ಇವಳನ್ನು



ನೋಡಿ ರಾಜ ವಿಷಯವೇನೆಂದು ವಿಚಾರಿಸಿದನು. ಅವಳು, 'ಬಾವಿಯನ್ನು ತೋಡಿದ್ದಾಯಿತು; ಅದನ್ನು ಕಿತ್ತು ಅಂಗಡಿಬೀದಿಗೆ ತಂದು ಹಾಕಲು ಪ್ರಯತ್ನಿಸುತ್ತಿದ್ದೆನು. ಆದರೆ ಅದು ತುಂಬಾ ಭಾರವಾಗಿತ್ತು. ನನಗೆ ಸಹಾಯ ಮಾಡುವುದಕ್ಕಾಗಿ, ಅರಮನೆಯಲ್ಲಿರುವ ನಿನ್ನ ಬಾವಿಯನ್ನು ಸ್ವಲ್ಪ ಕಳಿಸಿಕೊಡು. ಈ ಹಗ್ಗದ ಒಂದು ಕೊನೆಯನ್ನು ನಿನ್ನ ಬಾವಿಯ ಕುತ್ತಿಗೆಗೂ, ಇನ್ನೊಂದು ಕೊನೆಯನ್ನು ನಮ್ಮ ಬಾವಿಯದಕ್ಕೂ ಕಟ್ಟೋಣ. ಆಗ ನಮ್ಮ ಬಾವಿಯನ್ನು ಪೇಟೆಗೆಳೆಯುವುದು ನಿನ್ನ ಬಾವಿಗೆ ಸಾಧ್ಯವಾಗುತ್ತದೆ.' ಎಂದಳು.

ಈ ಮಾತು ರಾಜನಿಗೆ ದಿಗ್‌ಭ್ರಮೆ ಹಿಡಿಸಿತು. 'ನಿಮ್ಮ ಬಾವಿಯನ್ನು ತರುವುದಕ್ಕಾಗಿ ನನ್ನ ಬಾವಿಯನ್ನು ಕಳಿಸುವುದು ಹೇಗೆ ಸಾಧ್ಯ?' ಎಂದನು.

ಆಗ ರಾಜ ಹೇಳಿದನು, 'ಈ ಸಲ ನೀನು ನನ್ನನ್ನು ನಿಜವಾಗಿಯೂ ಸೋಲಿಸಿದೆ. ಇನ್ನು ಮುಂದೆ ನಾನು ನಿಮಗೆ ಯಾವ ತೊಂದರೆಯನ್ನೂ ಕೊಡುವುದಿಲ್ಲ. ಸುಖವಾಗಿ ಹೋಗಿ.'

ಇದಾದ ಮೇಲೆ ಬ್ರಾಹ್ಮಣ ಅರಮನೆಗೆ ಮತ್ತೆ ಬಂದನು. ರಾಜ ಅವನ ಮುಖದ ನೀರಿಳಿಸಿದನು; 'ಲಕ್ಷ್ಮಿಯ ಕಟಾಕ್ಷ ನಿನ್ನ ಮೇಲೆ ಬಿದ್ದಿರಬಹುದು; ಆದರೆ ಸರಸ್ವತಿಯ ಕಟಾಕ್ಷ ಆ ಹುಡುಗಿಯ ಮೇಲೆ ಬಿದ್ದಿದೆ. ಅವಳು ನಿನಗಿಂತ ಹೆಚ್ಚು ಶಕ್ತಿವಂತಳೆಂಬುದು ಸ್ಪಷ್ಟವಾಗಿದೆ' ಎಂದನು. ರಾಜಕೋಪಕ್ಕೆ ತುತ್ತಾದ ಬ್ರಾಹ್ಮಣ ರಾಜ್ಯಭ್ರಷ್ಟನಾದನು; ಅವನ ಆಸ್ತಿಯಷ್ಟನ್ನೂ ರಾಜ ವಶಪಡಿಸಿಕೊಂಡನು.

ರಾಜಬೀದಿಯಲ್ಲಿ ಸಾಗುತ್ತಿದ್ದ ಸರಸ್ವತಿಗೆ ಅಲ್ಲೇ ಲಕ್ಷ್ಮಿ ಸಿಕ್ಕಿದಳು. ಆಗ ಸರಸ್ವತಿ ಕೇಳಿದಳು, 'ಈಗ ಯಾರು ಹೆಚ್ಚು?'. ಲಕ್ಷ್ಮಿ ದುಃಖದಿಂದ ಉತ್ತರ ಕೊಟ್ಟಳು, 'ನೀನು'.

## ಮಾಯೆಯ ಕೊಳಲುಗಳು

ಒಂದು ಹುಲಿ ಕಾಡಿನಲ್ಲಿ ಬೇಟೆಯಾಡುತ್ತಿತ್ತು. ಹಾಗೆಯೇ ಹುಡುಕುತ್ತಿದ್ದಾಗ ಅದಕ್ಕೊಂದು ಕಾಡುಹಂದಿ ಸಿಕ್ಕಿತು. ಹುಲಿ, 'ಹಂದಿಯೇ, ನನಗೆ ಬಹಳ ಹಸಿವಾಗುತ್ತಿದೆ, ನಾನು ನಿನ್ನನ್ನು ತಿಂದು ಬಿಡುತ್ತೇನೆ' ಎಂದಿತು.

ಹಂದಿ ಹೇಳಿತು, 'ನನ್ನನ್ನು ತಿಂದುಹಾಕುವ ವಿಷಯವನ್ನು ಆಮೇಲೆ ಚರ್ಚೆ ಮಾಡೋಣ, ಮೊದಲು ನಾವು ಯುದ್ಧ ಮಾಡೋಣ, ನಾನು ಸೋತರೆ ಮಾತ್ರ ನೀನು ನನ್ನನ್ನು ತಿನ್ನಬಹುದು, ಇಲ್ಲದಿದ್ದರೆ ಇಲ್ಲ.'

ಹುಲಿ ಹೇಳಿತು, 'ನಾವು ಯುದ್ಧ ಮಾಡುವಾಗ ತೀರ್ಪು ಕೊಡುವವರು ಯಾರು?' ಹಂದಿ ಹೇಳಿತು, 'ನೀನು ಬಲು ಬೇಗ ಓಡಬಲ್ಲೆ. ಹೋಗಿ, ಯಾರಾದರೂ ತೀರ್ಪುಗಾರರನ್ನು ಹುಡುಕಿ ಕರೆದುಕೊಂಡು ಬಾ.'

ಇದನ್ನು ಕೇಳಿ ಹುಲಿ ತೀರ್ಪುಗಾರನನ್ನು ಹುಡುಕಿ ತರಲು ಹೊರಟಿತು. ಅದೇ ಕಾಡಿನಲ್ಲಿ ಆಗ ರೇರಿಯೂ–ಜಿಜಾ ಎಂಬ ಹೆಸರಿನ ಮನುಷ್ಯನೊಬ್ಬನು ಬೇಟೆಯಾಡುತ್ತಿದ್ದನು. ತನ್ನ ಹತ್ತಿರಕ್ಕೆ ಬಂದ ಹುಲಿಯನ್ನು ಕಂಡು ಅವನು ಭೀತಿಯಿಂದ ಓಡತೊಡಗಿದನು. ಹುಲಿ ಅವನನ್ನು ಕರೆದು, 'ಭಯಪಡಬೇಡ' ಎಂದಿತು.

ರೇರಿಯೂ–ಜಿಜಾ ಕೇಳಿದನು,'ನೀನು ನನ್ನನ್ನು ತಿನ್ನಲು ಬಂದಿಲ್ಲವೇನು?' ಹುಲಿ ಪ್ರಮಾಣ ಮಾಡಿ ಹೇಳಿತು, 'ನಿನ್ನನ್ನು ತಿನ್ನುವ ಉದ್ದೇಶವೇ ನನಗಿಲ್ಲ. ಒಂದು ಕಾಡು ಹಂದಿಗೂ ನನಗೂ ಒಂದು ಯುದ್ಧ ನಡೆಯಲಿದೆ. ನೀನು ಅದಕ್ಕೆ ತೀರ್ಪುಗಾರನಾಗಿರಬೇಕು, ಅಷ್ಟೆ.'

ರೇರಿಯೂ–ಜಿಜಾ, ತುಂಬಾ ಒತ್ತಾಯ ಮಾಡಿದ ಮೇಲೆ, ಅದಕ್ಕೆ ಒಪ್ಪಿಕೊಂಡು ಹುಲಿಯೊಡನೆ ಹೊರಟನು.

ಅವರು ಬರುವುದರೊಳಗಾಗಿ ಹಂದಿ ತನ್ನ ಮೈಗೆಲ್ಲಾ ಕೆಸರನ್ನು ಬಳಿದುಕೊಂಡಿತ್ತು ಅಲ್ಲಿಗೆ ಬಂದ ಹುಲಿ ಆ ಮನುಷ್ಯನಿಗೆ ಹೇಳಿತು, 'ಈ ಯುದ್ಧದಲ್ಲಿ ಯಾರು ಗೆಲ್ಲುತ್ತಾರೆಂಬುದನ್ನು ನೀನು ನಿರ್ಧರಿಸಬೇಕು.' ಹುಲಿಯೂ ಹಂದಿಯೂ ಹೋರಾಡತೊಡಗಿದವು. ಹಂದಿ ತನ್ನ ಮೈಯನ್ನು ಒದರಿತು; ಹುಲಿಯ ಕಣ್ಣಿಗೆ ಕೆಸರು ಹಾರಿತು. ಅದು ಹೆದರಿ ಓಡಿಹೋಗಲು ಹಿಂದಿರುಗಿ ನೋಡಿತು. ಇದನ್ನು ನೋಡಿದ ರೇರಿಯೂ–ಜಿಜಾ ಹಂದಿ ಗೆದ್ದಿತೆಂದು ಸಾರಿದನು. ಈ ತೀರ್ಮಾನವನ್ನು ಹುಲಿಯೂ ಒಪ್ಪಿಕೊಂಡಿತು.

ಹೀಗೆ ಹಂದಿ ಹುಲಿಯ ಬಾಯಿಂದ ತಪ್ಪಿಸಿಕೊಂಡಿತು. ಆದರೆ ಹುಲಿಗೆ ತುಂಬಾ ಹಸಿವಾಗಿತ್ತು. ಅದು ರೇರಿಯೂ–ಜಿಜಾವಿಗೆ ಹೇಳಿತು, 'ನನಗೆ ತುಂಬಾ ಹಸಿವು. ಈಗ ನಿನ್ನನ್ನು ನಾನು ತಿನ್ನಲೇ ಬೇಕಾಗಿದೆ.'

'ನೀನು ಹಾಗೆ ಮಾಡುವುದಿಲ್ಲವೆಂದು ನನಗೆ ಭಾಷೆ ಕೊಟ್ಟಿದ್ದೀಯೆ. ನೀನು ನಿಜವಾಗಿಯೂ ಮನಸ್ಸನ್ನು ಬದಲಾಯಿಸಿಕೊಳ್ಳುವಂತಿಲ್ಲ' ಎಂದು ರೇರಿಯೂ–ಜಿಜಾ ಪ್ರತಿಭಟಿಸಿದನು.

ಹುಲಿ ಉತ್ತರಿಸಿತು, 'ಗೆದ್ದವನು ನಾನೆಂದು ನೀನು ತೀರ್ಪು ಕೊಟ್ಟಿದ್ದರೆ ನಾನು ಹಂದಿಯನ್ನು ತಿಂದು ಹಾಕುತ್ತಿದ್ದೆ. ನಿನ್ನನ್ನು ತಿನ್ನುವ ಅಗತ್ಯವೇ ಇರಲಿಲ್ಲ. ಹಂದಿಯ ಪರವಾಗಿ ನೀನು ತೀರ್ಪು ಕೊಟ್ಟಿದ್ದರಿಂದ ಅದು ತಪ್ಪಿಸಿಕೊಂಡು ಓಡಿಹೋಯಿತು. ನಿನ್ನನ್ನು ಬಿಟ್ಟರೆ ನನಗೀಗ ಆಹಾರವೇ ಇಲ್ಲ.'

ತಾನು ಆಡಿದಂತೆ ಅದು ಮಾಡಿಯೇ ತೀರುವುದೆಂಬ ಭೀತಿಯಿಂದ ರೇರಿಯೂ–ಜಿಜಾ ಜೀವವುಳಿಸಿಕೊಳ್ಳುವುದಕ್ಕಾಗಿ ಓಟಕಿತ್ತನು. ಓಡಿ ಓಡಿ ಸುಸ್ತಾಗಿ ಕಡೆಗೆ ಒಂದು ಮಹಾವೃಕ್ಷದ ಮೇಲೆ ಹತ್ತಿ ಕುಳಿತನು. ಹುಲಿಗೆ ಅದನ್ನು ಹತ್ತುವುದಕ್ಕಾಗಲಿಲ್ಲ; ಅದರ ಬುಡದಲ್ಲಿ ಕುಳಿತುಬಿಟ್ಟಿತು. ಅವನು ಇಳಿದು ಬಂದಾಗ ತಿನ್ನೋಣವೆಂದು ಕಾದಿತ್ತು.

ಕಾಡೆಮ್ಮೆಗಳ ಒಂದು ಹಿಂಡಿನ ವಿಶ್ರಾಂತಿಧಾಮವಾಗಿತ್ತು ಈ ವೃಕ್ಷ. ಅವು ಪ್ರತಿ ಸಂಜೆಯೂ ಅಲ್ಲಿಗೆ ಬಂದು ರಾತ್ರಿಯೆಲ್ಲಾ ಅಲ್ಲಿ ತಂಗುತ್ತಿದ್ದವು. ಎಂದಿನಂತೆ ಅವು ಆ ಸಂಜೆಯೂ ಅಲ್ಲಿಗೆ ಬಂದಾಗ ಹುಲಿಯನ್ನು ಓಡಿಸಿಬಿಟ್ಟವು.

ಬೆಳಗಾಗುತ್ತಲೆ, ಕಾಡೆಮ್ಮೆಗಳು ಮೇವಿಗಾಗಿ ಹೊರಟುಹೋದವು. ಆಗ ರೇರಿಯೂ–ಜಿಜಾ ಮರದಿಂದ ಇಳಿದು, ಕೆಳಗಿನ ನೆಲವನ್ನು ಚೊಕ್ಕಟವಾಗಿ ಗುಡಿಸಿ ಮತ್ತೆ ಮೇಲಕ್ಕೆ ಹತ್ತಿಹೋದನು. ಅನೇಕ ದಿನಗಳ ತನಕ ಅವನು ಹೀಗೆಯೇ ಮಾಡಿದನು. ಪ್ರತಿ ಸಂಜೆಯೂ ತಾವು ವಿಶ್ರಾಂತಿಧಾಮಕ್ಕೆ ಹಿಂದಿರುಗಿದಾಗ, ಅಲ್ಲಿನ ಆವರಣವೆಲ್ಲ ಚೊಕ್ಕಟವಾಗಿರುತ್ತಿದ್ದುದನ್ನು ಗಮನಿಸಿ, ಆ ಕಾಡೆಮ್ಮೆಗಳು ಆಶ್ಚರ್ಯಪಟ್ಟವು; 'ಇಲ್ಲಿ ಯಾರೋ ಬಂದು

ಸೇರಿಕೊಂಡಿದ್ದಾರೆ. ಅವನನ್ನು ಹಿಡಿಯುವುದು ಹೇಗೆ?' ಎಂದು ಪರಸ್ಪರ ಮಾತಾಡಿಕೊಂಡವು.

ಒಂದು ಮುದಿಯೆಮ್ಮೆ ಹೇಳಿತು, 'ನಾನು ಹೇಗಿದ್ದರೂ ಮುದಿಯಾಗಿದ್ದೇನೆ. ಮೇವಿಗಾಗಿ ದೂರ ಹೋಗುವುದು ನನ್ನಿಂದ ಆಗದ ಕೆಲಸ. ನಾಳೆ ಇಲ್ಲೇ ಕಾದಿದ್ದು, ಅವನನ್ನು ಹಿಡಿಯುತ್ತೇನೆ.'

ಈ ಮಾತಿಗೆ ಉಳಿದ ಎಮ್ಮೆಗಳೂ ಒಪ್ಪಿಕೊಂಡವು; ತಾವು ಸಂಜೆಗೆ ಬರುವಾಗ ಅದಕ್ಕೂ ಒಂದಿಷ್ಟು ಮೇವನ್ನು ತರುವುದಾಗಿ ಮಾತುಕೊಟ್ಟವು.

ಮರುದಿನ ಬೆಳಗಾದಾಗ, ಆ ಮುದಿಯೆಮ್ಮೆಯನ್ನು ಅಲ್ಲಿಯೇ ಬಿಟ್ಟು, ಉಳಿದೆಲ್ಲವೂ ಹೊರಟುಹೋದವು. ಮುದಿಯೆಮ್ಮೆ ಸತ್ತ ಹಾಗೆ ನಟಿಸುತ್ತಾ ಅಲ್ಲೇ ಬಿದ್ದುಕೊಂಡಿತ್ತು. ರೇರಿಯೂ-ಜಿಜಾ ಯಥಾ ಪ್ರಕಾರ ಮರದಿಂದ ಇಳಿದು ನೆಲವನ್ನು ಗುಡಿಸಿದನು. ಅದು ಅಲ್ಲಿ ಬಿದ್ದಿರುವುದನ್ನು ಕಂಡು, ಸತ್ತಿದೆ ಎಂದು ತಿಳಿದು ವ್ಯಥೆಪಟ್ಟು, ಅದರ ಮೈಯನ್ನು ತೊಳೆದನು. ಆ ಸಮಯದಲ್ಲಿ ಅದು ಅವನನ್ನು ತನ್ನ ಕಾಲುಗಳ ನಡುವೆ ಸಿಕ್ಕಿಸಿಕೊಳ್ಳಲು ಪ್ರಯತ್ನಿಸಿತು. ಅವನಿಗೆ ಪರಮಾಶ್ಚರ್ಯವಾಯಿತು. ಅವನು ತಟ್ಟನೆ ಎಗರಿ ಮರವನ್ನು ಸೇರಿಕೊಂಡನು. ಸಂಜೆಯಾಗುತ್ತಲೇ ಅಲ್ಲಿಗೆ ಉಳಿದ ಎಮ್ಮೆಗಳು ಹಿಂದಿರುಗಿದವು. ನಡೆದ ಸಂಗತಿಯನ್ನು ತಿಳಿದು ಮುದಿಯೆಮ್ಮೆ ಅವನನ್ನು ಬಿಟ್ಟುಬಿಟ್ಟಿತಲ್ಲ ಎಂದು ಕೋಪಗೊಂಡವು. ಅದಕ್ಕೆ ಮೇವನ್ನೂ ಕೊಡಲಿಲ್ಲ.

ಮಾರುದಿನ ಬೆಳಗಾಗ ಮುದಿಯೆಮ್ಮೆ ಹೇಳಿತು, 'ಈ ಸಲ ನಾನು ತಪ್ಪುವುದಿಲ್ಲ. ಈ ಹೊತ್ತು ನಾನು ಅವನನ್ನು ಹಿಡಿದುಹಾಕುತ್ತೇನೆ.'

ರೇರಿಯೂ-ಜಿಜಾ ಮತ್ತೆ ಇಳಿದು ಬಂದನು. ಎಂದಿನಂತೆ ನೆಲವನ್ನು ಗುಡಿಸಿದನು; ಅದು ನಿಜವಾಗಿ ಸತ್ತಿದೆಯೆಂದು ತಿಳಿದು ಎಮ್ಮೆಯ ಮೈಯನ್ನು ತೊಳೆದನು. ತೊಳೆಯುವಾಗ ಸಾಕಷ್ಟು ಜಾಗರೂಕನಾಗಿಯೇ ಇದ್ದನು. ಆದರೆ ಹಾಗೆ ಮಾಡುತ್ತಿದ್ದಾಗ, ಅದು ಅವನನ್ನು ಭದ್ರವಾಗಿ ಹಿಡಿದುಕೊಂಡಿತು. ಅವನು ಈ ಸಲ ತಪ್ಪಿಸಿಕೊಳ್ಳಲಾಗಲಿಲ್ಲ. ಸಂಜೆಗೆ ಉಳಿದ ಎಮ್ಮೆಗಳು ಹಿಂದಿರುಗಿದವು. ಮುದಿಯೆಮ್ಮೆಯ ಹಿಡಿತದಲ್ಲಿ ಸಿಕ್ಕಿಬಿದ್ದ ಮನುಷ್ಯನನ್ನು ಕಂಡು ತುಂಬಾ ಸಂತೋಷಪಟ್ಟವು; 'ಹೆದರಬೇಡ. ನೀನು ನಮಗೆ ದೊಡ್ಡ ಉಪಕಾರ ಮಾಡಿದ್ದೀಯೆ. ನಾವು ನಿಮಗೆ ಸರ್ವವಿಧದಲ್ಲಿಯೂ ಸಹಾಯ ಮಾಡುತ್ತೇವೆ. ಇಂದಿನಿಂದ ನೀನು ಬೇಕಾದಷ್ಟು ಹಾಲನ್ನು ಕುಡಿಯಬಹುದು' ಎಂದವು.

ಅಲ್ಲಿಂದ ಮುಂದೆ ರೇರಿಯೂ-ಜಿಜಾ ಎಮ್ಮೆಗಳೊಂದಿಗೆ ಸುಖವಾಗಿ ಬಾಳುತ್ತಿದ್ದನು. ಅವನು ದಿನವೂ ವಿಶ್ರಾಂತಿಧಾಮವನ್ನು ಗುಡಿಸುತ್ತಿದ್ದನು. ಯಾವುದಾದರೂ ಎಮ್ಮೆಗೆ ರೋಗ ತಗುಲಿದಾಗ ಅಥವಾ ಮೇವಿಗಾಗಿ ಹೊರ ಹೊರಡಲು ತ್ರಾಣವಿಲ್ಲದಿದ್ದಾಗ ಅವನು ಅದಕ್ಕೆ ಮೇವನ್ನು ತಂದು ಒದಗಿಸುತ್ತಿದ್ದನು.

ಒಂದು ದಿನ ಎಮ್ಮೆಗಳು ರೇರಿಯೂ-ಜಿಜಾವನ್ನು ಕುರಿತು ಹೇಳಿದವು, 'ಕೆಲವು ವೇಳೆ ನಾವು ಬಲು ದೂರ ಹೋಗಬೇಕಾಗುತ್ತದೆ. ಹಾಗೆ ಹೋದಾಗ ನಿನ್ನ ಯೋಗ ಕ್ಷೇಮ ನಮಗೆ ತಿಳಿಯುವುದು ಹೇಗೆ? ಎರಡು ಕೊಳಲುಗಳನ್ನು ಮಾಡಿಕೋ – ಒಂದಕ್ಕೆ ಒಂದೇ ನಳಿಗೆಯೂ,

ಇನ್ನೊಂದಕ್ಕೆ ಎರಡು ಎರಡು ನಳಿಗೆಗಳೂ ಇರಲಿ. ಒಂದೇ ನಳಿಗೆಯುಳ್ಳ ಕೊಳಲನ್ನು ನೀನು ಬಾರಿಸಿದಾಗ, ನೀನು ಸುಖವಾಗಿದ್ದೀಯೆ ಎಂದು ತಿಳಿಯುತ್ತೇವೆ; ನಮ್ಮ ಪ್ರಯಾಣ ಮುಂದುವರಿಯುತ್ತದೆ. ಎರಡು ನಳಿಗೆಯುಳ್ಳ ಕೊಳಲನ್ನು ಬಾರಿಸಿದಾಗ ನಾವು ಕೂಡಲೇ ನಿನ್ನ ಬಳಿಗೆ ಹಿಂದಿರುಗುತ್ತೇವೆ.'

ಒಂದು ದಿನ ರೇರಿಯೂ–ಜಿಜಾ ಸ್ನಾನಕ್ಕೆಂದು ಹೊಳೆಗಿಳಿದಾಗ ಅವನ ತಲೆಯಿಂದ ಸ್ವಲ್ಪ ಕೂದಲು ಬಿದ್ದುಹೋಯಿತು. ಈ ಅಮೂಲ್ಯವಸ್ತುವನ್ನು ಎಸೆಯಬಾರದೆಂದುಕೊಂಡು ಒಂದು ಮರದ ಪೆಟ್ಟಿಗೆಯನ್ನು ತಯಾರಿಸಿ ಅದರೊಳಗೆ ಈ ಕೂದಲನ್ನಿಟ್ಟು ನೀರಿನಲ್ಲಿ ತೇಲಿಬಿಟ್ಟನು. ಅದು ಹೊಳೆಯ ದಿಕ್ಕನ್ನೇ ಅನುಸರಿಸಿ ಚಲಿಸಿತು.

ಇನ್ನೂ ಮುಂದೆ ಅದೇ ಹೊಳೆಯಲ್ಲಿ ಅಸ್ವಾಮಿನ ರಾಜನ ಮಗಳು ಸ್ನಾನಮಾಡುತ್ತಿದ್ದಳು. ಈ ಪೆಟ್ಟಿಗೆ ಅವಳ ಕಣ್ಣಿಗೆ ಬಿತ್ತು. ಅವಳು ಅದನ್ನು ಎತ್ತಿಕೊಂಡುಹೋಗಿ ದಡದ ಮೇಲೆ ಇರಿಸಿ ಬಿಚ್ಚಿ ನೋಡಿದಳು, 'ಎಷ್ಟು ಸೊಗಸಾದ ಕೂದಲು! ಇದು ಯಾರದೋ, ನಾನು ಅವನನ್ನು ಮದುವೆಯಾಗಲೇ ಬೇಕು' ಎಂದುಕೊಂಡಳು. ಮನೆಗೆ ಬಂದಳು; ಅದೇ ಕೊರಗು, ಊಟ ಬೇಡ; ಕಡೆಗೆ ಯಾರೊಂದಿಗೆ ಮಾತೂ ಕೂಡ ಬೇಡ. ಇದರಿಂದ ಆತಂಕಗೊಂಡ ಅವಳ ತಂದೆ ತಾಯಿಗಳು ಅವಳನ್ನು ಕೇಳಿದರು, 'ಈ ಹಟ ಬೇಡ, ನಿನಗೆ ಏನು ಬೇಕೋ ಹೇಳು. ಏನಾದರೂ ಸರಿಯೆ, ತಂದುಕೊಡುತ್ತೇವೆ.'

ಆಗ ಹುಡುಗಿ ಪೆಟ್ಟಿಗೆಯನ್ನು ತೆರೆದು ಅದರೊಳಗಿದ್ದ ಕೂದಲನ್ನು ತೋರಿಸಿ, 'ಈ ಕೂದಲು ಯಾರದ್ದೊ, ಅವನನ್ನು ನಾನು ಮದುವೆಯಾಗಬಯಸುತ್ತೇನೆ' ಎಂದಳು.

ರಾಜದಂಪತಿಗಳು ಎಲ್ಲಾ ಮಾನವರನ್ನೂ ಪ್ರಾಣಿಗಳನ್ನೂ ಪಕ್ಷಿಗಳನ್ನೂ ಕರೆದು, 'ಇದು ಯಾರ ಕೂದಲು' ಎಂದು ಕೇಳಿದರು. ಯಾರಿಗೂ ಉತ್ತರ ಹೊಳೆಯಲಿಲ್ಲ. ಕಡೆಗೊಂದು ಕಾಗೆ ಹೇಳಿತು, 'ನಾನು ಹೋಗಿ ಅವನನ್ನು ಪತ್ತೆ ಮಾಡುತ್ತೇನೆ' ಅದು ದೇಶದ ಮೇಲೆಲ್ಲಾ ಸುತ್ತಾಡುತ್ತಾ ಬಂದು ಕಡೆಗೆ ರೇರಿಯೂ–ಜಿಜಾ ಇದ್ದ ಮರದ ಬಳಿಗೆ ಬಂತು. ಅವನು ಎರಡು ಕೈಗಳಲ್ಲೂ ತನ್ನ ಎರಡು ಕೊಳಲುಗಳನ್ನು ಹಿಡಿದು ಅಲ್ಲೇ ಅಡ್ಡಾಡುತ್ತಿದ್ದನು. ಹಾರಿ ಬಂದ ಕಾಗೆ ಅವನ ಮೇಲೆ ಸರಿಯಾಗಿ ಇಳಿದು ನೆತ್ತಿಯ ಮೇಲೆ ಕುಕ್ಕಿತು. ರೇರಿಯೂ–ಜಿಜಾ ಅದನ್ನು ಓಡಿಸುವುದಕ್ಕಾಗಿ ತನ್ನೆರಡು ಕೈಗಳನ್ನೂ ಮೇಲೆತ್ತಿ ಬಡಿದನು. ಈ ಅವಸರದಲ್ಲಿ ಎರಡು ಕೊಳಲುಗಳೂ ಕೆಳಗೆ ಬಿದ್ದವು. ಅವುಗಳನ್ನು ಹಾರಿಸಿಕೊಂಡು ಹೋಗಿ ರಾಜಕುಮಾರಿಗೆ ಅರ್ಪಿಸಿ, 'ಇನ್ನು ಅವನು ನಿನ್ನ ಬಳಿಗೆ ಬರುವುದು ಖಂಡಿತ' ಎಂದಿತು.

ಆ ಹುಡುಗಿ ಒಂಟಿ ನಳಿಗೆಯಿದ್ದ ಕೊಳಲನ್ನು ಊದತೊಡಗಿದಳು; ಎಮ್ಮೆಗಳು (ತಾವು ಹಿಂದೆಯೇ ರೇರಿಯೂ–ಜಿಜಾವಿಗೆ ತಿಳಿಸಿದ್ದಂತೆ) ತಮ್ಮ ಪ್ರಯಾಣವನ್ನು ಮುಂದುವರಿಸಿದವು. ಆಮೇಲೆ ಇನ್ನೊಂದು ಕೊಳಲಿನ ನಾದ ಹೇಗಿರಬಹುದೆಂಬ ಕುತೂಹಲದಿಂದ ಅವಳು ಎರಡು ನಳಿಗೆಯ ಕೊಳಲನ್ನೂ ಊದತೊಡಗಿದಳು. ಆಗ ಎಮ್ಮೆಗಳು ಹಠಾತ್ತನೆ ಅವಳ ಕಡೆಗೆ ಧಾವಿಸಿ ಬಂದವು. ಅವು ಚಲಿಸುತ್ತಿರುವುದನ್ನು ಕಂಡ ರೇರಿಯೂ–ಜಿಜಾ, ತನ್ನ ಕೊಳಲುಗಳು ಯಾರ ಕೈಗೆ ಸೇರಿವೆಯೋ ಅವರ ಬಳಿಗೇ ಇವೂ ಹೋಗುತ್ತಿರಬೇಕೆಂದು ಊಹಿಸಿದನು. ತಾನೂ ಅವುಗಳನ್ನು ಅನುಸರಿಸಿ ನಡೆದು ಕಡೆಗೆ ರಾಜಕುಮಾರಿಯ



ಅರಮನೆಯನ್ನು ಸೇರಿದನು. ಅವಳ ಬಳಿಗೆ ಹೋಗಿ, 'ನನ್ನ ಕೊಳಲುಗಳನ್ನು ಕೊಟ್ಟುಬಿಡು' ಎಂದನು. 'ನನ್ನನ್ನು ನೀನು ಮದುವೆ ಮಾಡಿಕೊಂಡರೆ ಮಾತ್ರ ಅವುಗಳನ್ನು ನಿನಗೆ ಕೊಡುತ್ತೇನೆ' ಎಂದು ಅವಳು ಉತ್ತರ ಕೊಟ್ಟಳು.

ಅವಳ ಸಲಹೆಯನ್ನು ಇವನು ಹೃತ್ಪೂರ್ವಕವಾಗಿ ಅನುಮೋದಿಸಿದನು. ಕ್ಷಿಪ್ರದಲ್ಲೇ ಇಬ್ಬರಿಗೂ ಮದುವೆಯಾಯಿತು. ತನ್ನ ಅಳಿಯನ ಬಳಿ ಬೇಕಾದಷ್ಟು ಎಮ್ಮೆಗಳಿರುವುದನ್ನೂ, ಅವುಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವ ಒಂದು ಜೊತೆ ಕೊಳಲುಗಳಿರುವುದನ್ನೂ ಕೇಳಿದ ರಾಜ ಅವುಗಳನ್ನು ಕಿತ್ತುಕೊಳ್ಳುವ ನಿರ್ಧಾರವನ್ನು ಮಾಡಿದನು; ಗುಟ್ಟಾಗಿ ಕೊಳಲನ್ನು ಕದ್ದು, ಮಗಳನ್ನೂ ಅಳಿಯನನ್ನೂ ಮನೆಯಿಂದ ಓಡಿಸಿದನು.

ರೇರಿಯೂ–ಜಿಜಾ ತನ್ನ ಹೆಂಡತಿಗೆ ಹೇಳಿದನು, 'ನಾವು ಇಲ್ಲಿರುವುದು ಸರಿಯಲ್ಲ; ನನಗೆ ಬಹುಕಾಲ ಆಶ್ರಯವನ್ನು ನೀಡಿದ್ದ ಮಹಾವೃಕ್ಷವೊಂದಿದೆ. ಅಲ್ಲಿಗೆ ಹೋಗೋಣ'

ಅವರು ಅಲ್ಲಿಗೆ ಹೋದರು. ನೆಮ್ಮದಿಯಾಗಿದ್ದರು. ಅವರಿಗೆ ಬೇಕಾದಷ್ಟು ಮಂದಿ ಹೆಣ್ಣುಮಕ್ಕಳು ಹುಟ್ಟಿದರು. ತಮ್ಮ ಸ್ನೇಹಿತರಾದ ಕಾಡೆಮ್ಮೆಗಳೊಂದಿಗೆ ಕಾಡಿನಲ್ಲಿ ವಾಸಮಾಡುತ್ತಾ, ಅವರು ಆನಂದವಾಗಿದ್ದರು.

# ಎಲ್ಲದರ ಕೊನೆ

## ಸಾವು ಪ್ರಪಂಚಕ್ಕೆ ಕಾಲಿಟ್ಟದ್ದು ಹೇಗೆ

ಲೋಕದ ಮೂಲಯೋಜನೆಯಲ್ಲಿ ಸಾವಿಗೆ ಎಡೆಯಿರಲಿಲ್ಲ. ಅದು ಅನಂತರ ತಲೆಹಾಕಿತೆಂದು ಗುಡ್ಡಗಾಡಿನ ಜನರ ಭಾವನೆ. ನಿತ್ಯಯೌವನದ ಭಾಗ್ಯವಿಲ್ಲದಿದ್ದರೆ ಅನಿರ್ದಿಷ್ಟವಾಗಿ ಬೆಳೆದ ದೀರ್ಘಾಯುಷ್ಯ ವ್ಯರ್ಥವೇ ಸರಿ. ಬಲು ಹಿಂದೆಯೇ ಇದನ್ನು ಸ್ವಿಫ್ಟ್ ತನ್ನ ಗಲಿವರನ ಪ್ರವಾಸಗಳಲ್ಲಿ ಕಾಣಿಸಿದ್ದಾನೆ. ಈ ಸಿಂಗ್‌ಫೋ ಕಥೆ ಮಾನವನಿಗೆ ಒದಗಿದ ಸಾವು ವರವೇ ಹೊರತು ಶಾಪವಲ್ಲವೆಂದು ಸೂಚಿಸುತ್ತದೆ.

ಆದಿಯಲ್ಲಿ ಜನ ಸಾಯಲಿಲ್ಲ; ಅವರಿಗೆ ಅಳುವುದಕ್ಕೆ ಬಾರದು. ಅವರು ಮುದುಕರಾದರು; ಮುಪ್ಪು ಬೆಳೆದ ಹಾಗೆಲ್ಲ ಅವರ ಕಷ್ಟ ಹೆಚ್ಚಿತು. ನಡೆಯುವುದಕ್ಕೆ ಶಕ್ತಿ ಸಾಲದು; ಹೊಟ್ಟೆಗೆ ಸಾಲದು; ಅವರ ಬದುಕಿನಲ್ಲಿ ಸುಖ ಸಂತೋಷ ಯಾವುದೂ ಇರಲಿಲ್ಲ.

ಒಂದು ಕಾಡಿನಲ್ಲಿ ಒಂದು ಉನ್ನತ ವೃಕ್ಷವಿತ್ತು; ಅಲ್ಲೊಂದು ಅಳಿಲು ವಾಸ ಮಾಡಿಕೊಂಡಿತ್ತು. ಒಂದು ದಿನ ಒಂದು ಹದ್ದು ಅಲ್ಲಿಗೆ ಹಾರುತ್ತ ಬಂತು; ಆಗ ಅಳಿಲು ಭಯಪಟ್ಟು ಕರಕರ ಶಬ್ದಮಾಡಿತು. ಇದರಿಂದ ಹದ್ದಿಗೆ ಸಿಟ್ಟು ಬಂದು ಅದನ್ನು ತನ್ನ ಪಂಜಗಳಲ್ಲಿ ಚುಚ್ಚಿ ಹಿಡಿದು ಕೊಂದುಹಾಕಿತು. ಅಳಿಲಿನ ದೇಹ ಕೆಳಗೆ ಬಿತ್ತು. ಅತ್ತ ಹೊಗುತ್ತಿದ್ದ ಸಿಂಗ್ರ–ಫಾಂಗ್–ಮಗಂ ಎಂಬ ಮನುಷ್ಯ ನೆಲದ ಮೇಲೆ ಬಿದ್ದಿರುವ ಅಳಿಲನ್ನು ಕಂಡು ಆಶ್ಚರ್ಯಚಕಿತನಾದನು; ಏಕೆಂದರೆ ಅವನು ತನ್ನ ಜನ್ಮದಲ್ಲಿ ಎಂದೂ ಸತ್ತ ಪ್ರಾಣಿಯನ್ನು ನೋಡಿರಲಿಲ್ಲ. 'ನಮ್ಮ ಜನ ಇದರ ಹಾಗೆ, ಕೈಕಾಲುಗಳನ್ನು ಒದರದೆ ಸ್ತಬ್ಧವಾಗಿ ಬಿದ್ದುಕೊಳ್ಳುವುದಿಲ್ಲವಲ್ಲ – ಏಕೆ?' ಎಂದುಕೊಂಡನು. ಅಳಿಲನ್ನು ತಂದು ತನ್ನ ಮನೆಯ ಮೂಲೆಯಲ್ಲಿ ಇರಿಸಿದನು; ಅದನ್ನು ಬಟ್ಟೆಯಿಂದ ಮುಚ್ಚಿದನು.

ಆಮೇಲೆ ಚಂದ್ರನನ್ನೂ ನಕ್ಷತ್ರಗಳನ್ನೂ ಕರೆದು, 'ಒಬ್ಬ ಮನುಷ್ಯ ಸತ್ತಿದ್ದಾನೆ; ಬಂದು ನೋಡಿ' ಎಂದನು ಚಂದ್ರನೂ, ನಕ್ಷತ್ರಗಳೂ, ಗುಡ್ಡಗಾಡುಗಳ ಎಲ್ಲಾ ಭೂತಗಳೊಂದಿಗೆ ಅಳುತ್ತಾ ಬಂದರು. ಸಿಂಗ್ರ–ಫಾಂಗ್–ಮಗಂ ಅವರಿಗೆ ಅಳಿಲನ್ನು ತೋರಿಸಿದನು. ಅವರಿಗೆ ಕೋಪ ಬಂತು, 'ಇದು ಮನುಷ್ಯನಲ್ಲ, ಇದೊಂದು ಪ್ರಾಣಿ' ಎಂದರು.

ಅವನು ಕೇಳಿದನು, 'ಈ ಅಳಿಲು ಸತ್ತದ್ದು ಹೇಗೆ? ಅದೇ ರೀತಿಯಲ್ಲಿ ಮನುಷ್ಯನೇಕೆ ಸಾಯುವುದಿಲ್ಲ?'

ಅವರು ಪ್ರಶ್ನಿಸಿದರು, 'ಮನುಷ್ಯರೂ ಸಾಯಬಯಸುತ್ತಾರೆಯೆ?'

ಅವನು ಉತ್ತರಿಸಿದನು, 'ಬಯಸುತ್ತಾರೆನ್ನುವುದು ಖಂಡಿತ; ವಯಸ್ಸು ಕಳೆದ ಹಾಗೆಲ್ಲ ಬದುಕು ದುಸ್ಸಹವಾಗುತ್ತದೆ.'

ಆಗ ಚಂದ್ರನೂ ನಕ್ಷತ್ರಗಳೂ ಸಕಲ ಭೂತಗಳೂ ನುಡಿದವು, 'ಈ ಅಳಿಲಿನ ಮಾಂಸವನ್ನು ತಿಂದರೆ, ನೀವೆಲ್ಲರೂ ಸಾಯುವಿರಿ.'

ಸಿಂಗ್ರ-ಫಾಂಗ್-ಮಗಂ ಅಳಿಲಿನ ದೇಹವನ್ನು ಕೊಯ್ದು ಚಿಕ್ಕ ಚಿಕ್ಕ ಹೋಳುಗಳಾಗಿ ಮಾಡಿ ಪ್ರಪಂಚದಲ್ಲಿರುವ ಸಮಸ್ತ ಮಾನವರಿಗೂ ಹಂಚಿದನು. ಇದರ ಫಲವಾಗಿ ಅವರಿಗೆ ಸಾವು ಒದಗಿತು. ಅಳುವುದನ್ನೂ ಕಲಿತರು. ಸಾವು ಈ ಪ್ರಪಂಚಕ್ಕೆ ಮೊತ್ತಮೊದಲು ಕಾಲಿಟ್ಟ ಬಗೆಯನ್ನು ಕುರಿತು ಅವರು ಹೇಳಿದ ಇನ್ನೊಂದು ಕಥೆ ಇಲ್ಲಿದೆ.

ಆದಿಯಲ್ಲಿ ಸೂರ್ಯರಿಬ್ಬರಿದ್ದರು; ಒಬ್ಬ ಗಂಡ, ಇನ್ನೊಬ್ಬಳು ಹೆಂಡತಿ. ಚಂದ್ರರಿಬ್ಬರಿದ್ದರು; ಒಬ್ಬ ಗಂಡ, ಇನ್ನೊಬ್ಬಳು ಹೆಂಡತಿ. ಈ ನಾಲ್ವರ ತಾಪವೂ ಮಿತಿಮೀರಿ ಭೂಮಿಯ ಮೇಲಿನ ಮರಗಿಡಗಳೂ ಹುಲ್ಲೂ ಒಣಗಿದವು; ಮಾನವರೂ ಪ್ರಾಣಿಗಳೂ ಸತ್ತರು.

ಸೂರ್ಯನ ಹೆಂಡತಿಯೂ ಚಂದ್ರನ ಗಂಡನೂ ಪರಸ್ಪರ ಪ್ರೀತಿಸತೊಡಗಿದರು. ಆದರೆ ಅವರು ಆಕಾಶದಲ್ಲಿ ಕೂಡುವುದು ಸಾಧ್ಯವಿರದೆ, ಭೂಮಿಗೆ ಇಳಿದು ಬರುತ್ತಿದ್ದರು. ಅವರು ಅಲ್ಲಿ ಬಂದು ಕೂಡಿದಾಗ ಸುತ್ತಣ ಪ್ರದೇಶವಷ್ಟೂ ಜ್ವಾಲಾಮಯವಾಗುತ್ತಿತ್ತು. ಇಂದು ಭೂಮಿ ಕೆಲವು ಸಲ ಕೆಂಪಾಗಿ, ಇನ್ನು ಕೆಲವು ಸಲ ಹಳದಿಯಾಗಿರುವುದಕ್ಕೆ ಇದೇ ಕಾರಣ. ಇದನ್ನು ನಾವು ಕಂಡಾಗ ಅಲ್ಲಿ ಸೂರ್ಯನೂ ಚಂದ್ರನೂ ಪ್ರೇಮ ಕೇಳಿಯಲ್ಲಿ ನಿರತರಾಗಿದ್ದರೆಂದು ತಿಳಿಯುತ್ತೇವೆ.

ಸೂರ್ಯ ಚಂದ್ರರು ಭೂಮಿಗೆ ಬಂದಾಗ, ಮಾನವರೂ ಪ್ರಾಣಿಗಳೂ ಓಡಿ ಹೋದರು; ಸುಟ್ಟುಹೋದೇವೆಂದು ಭಯಪಟ್ಟು ಅವಿತುಕೊಂಡರು. ರಹಸ್ಯ ಸ್ಥಳವೊಂದರಲ್ಲಿ ಎಲ್ಲರೂ ಸೇರಿ 'ಈ ಪಾಪಿಗಳನ್ನು ಅಡಗಿಸಬಲ್ಲವರು ಯಾರು?' ಎಂದು ಚರ್ಚೆ ಮಾಡಿದರು. ಅವರಲ್ಲಿ ಯಾರಿಗೂ ಸೂರ್ಯ ಚಂದ್ರರನ್ನು ಕೊಲ್ಲುವಷ್ಟು ತ್ರಾಣ ಇರಲಿಲ್ಲ. ಆದ್ದರಿಂದ ಆ ಸಾಮರ್ಥ್ಯವಿರುವವರನ್ನು ಹುಡುಕುತ್ತ ಹೋದರು.

ಚೌ-ಸಿಪು ಮತ್ತು ಖ್ರವೊ-ಲಿಬ್ಜಿ ಎಂಬ ಸೋದರರಿದ್ದರು; ಇಬ್ಬರೂ ಪ್ರಬಲಿಗಳು ಕಾಡನ್ನು ದಾಟಿ ತಮ್ಮ ಬಳಿಗೆ ಬರುತ್ತಿದ್ದ ಮಾನವರನ್ನೂ ಪ್ರಾಣಿಗಳನ್ನೂ ತಡೆದು ಅವರು ಕೇಳಿದರು, 'ಎಲ್ಲರೂ ಎಲ್ಲಿಗೆ ಹೋಗುತ್ತಿದ್ದೀರಿ?' ಆಗ ಮಾನವರೂ ಪ್ರಾಣಿಗಳೂ ಅವರಿಗೆ ನಡೆದ ಸಂಗತಿಯನ್ನೂ ತಮ್ಮ ಬಾಳಿಗೊದಗಿರುವ ಆತಂಕವನ್ನೂ ಅರಿಕೆ ಮಾಡಿದರು.

ಇದನ್ನು ಕೇಳಿ ಆ ಸೋದರರು, 'ಈ ದುಷ್ಕರ್ಮಿಗಳನ್ನು ನಾವು ಖಂಡಿತವಾಗಿ ಸಂಹರಿಸುತ್ತೇವೆ. ನೀವು ಎಲ್ಲಾದರೂ ಬಚ್ಚಿಟ್ಟುಕೊಳ್ಳಿ. ಅವರು ಇಲ್ಲಿಗೆ ಬರುವುದನ್ನೇ ನಾವು ಕಾದಿರುತ್ತೇವೆ, ಬಂದಾಗ ಕೊಲ್ಲುತ್ತೇವೆ' ಎಂದು ಅಭಯವಿತ್ತರು.

ಮಾನವರೂ ಪ್ರಾಣಿಗಳೂ ಅವಿತುಕೊಂಡರು; ಸ್ವಲ್ಪ ಹೊತ್ತಿನ ಮೇಲೆ ಸೂರ್ಯನ ಹೆಂಡತಿಯೂ ಚಂದ್ರನ ಗಂಡನೂ ಭೂಮಿಗೆ ಬಂದರು ಚೌ-ಸಿಪು ಮತ್ತು ಖ್ರವೊ-ಲಿಬ್ಜಿ ಅವರ ಮೇಲೆ ಬಾಣಗಳನ್ನು ಪ್ರಯೋಗಿಸಿದರು. ಖ್ರವೊ-ಲಿಬ್ಜಿಯ ಬಾಣ ಸೂರ್ಯನ ಹೆಂಡತಿಯನ್ನು ಇರಿಯಿತು; ಅವಳು ಸತ್ತು ಅಲ್ಲೇ ನೆಲಕ್ಕೆ ಉರುಳಿದರು. ಚೌ-ಸಿಪುವಿನ ಬಾಣ ಚಂದ್ರನ ಗಂಡನಿಗೆ ನಾಟಿತು. ಅಷ್ಟೇ; ಅವನನ್ನು ಒಡನೆಯೇ ಸಾಯಿಸಲಿಲ್ಲ. ಅವನು ತನ್ನ ಮೈ ಹೊಕ್ಕಿರುವ ಬಾಣದ ಸಮೇತ ಗಗನಕ್ಕೇರಿ ಹಾರಿಹೋಗಿ ತನ್ನ ಖಾಸಾ ಹೆಂಡತಿಯ ಬಳಿಗೆ

ತಲಪಿದನು; ಅವಳ ಆಲಿಂಗನಸುಖದಲ್ಲಿರುವಾಗಲೇ ಪ್ರಾಣಬಿಟ್ಟನು. ಬಾಣಕ್ಕೆ ಬಲಿಯಾದ ತನ್ನ ಗಂಡನನ್ನು ಕಂಡು ಅವಳು ಅತ್ತು ಗೋಳಾಡಿದಳು.

ಸೂರ್ಯ ಹೇಳಿದನು, 'ನನ್ನ ಹೆಂಡತಿ ಭೂಲೋಕದಲ್ಲಿ ಸತ್ತಿದ್ದಾಳೆ. ನನ್ನ ಭಾವ ಚಂದ್ರ ಇಲ್ಲಿ ಸತ್ತಿದ್ದಾನೆ. ಈಗ ಅವಳು ಅವನ ದೇಹವನ್ನು ಮಾನವರಿಗೂ ಪ್ರಾಣಿಗಳಿಗೂ ಕೊಡುವುದಾದರೆ, ಅವರೂ ಸಾಯುತ್ತಾರೆ.'

ಮಾನವರಿಗೂ ಪ್ರಾಣಿಗಳಿಗೂ ಎಚ್ಚರಿಕೆ ನೀಡಲು ಅವನು ಭೂಮಿಗೆ ಬಂದನು. 'ನನ್ನ ಸೋದರಿ ಚಂದ್ರ ನಿಮ್ಮನ್ನು ಕರೆದಾಗ, ನೀವು ಉತ್ತರ ಕೊಡಬೇಡಿ. ಆದರೆ ನಾನು ನಿಮ್ಮನ್ನು ಕೂಗಿದಾಗ ಉತ್ತರ ಕೊಡಬಹುದು' ಎಂದನು.

ಅವನು ತನ್ನ ಮನೆಗೆ ಹಿಂದಿರುಗಿದನು; ಆಗ ಕತ್ತಲು ಕವಿಯಿತು.

ರಾತ್ರಿಯಾದ ಕೂಡಲೆ ಚಂದ್ರ ತನ್ನ ಗಂಡನ ಶವವನ್ನು ಎತ್ತಿಕೊಂಡು ಜೋರಾಗಿ ಅಳುತ್ತಾ ಮನೆಯ ಹೊರಗೆ ಬಂದಳು. ಆ ಸಮಯದಲ್ಲಿ ಜಿಂಕೆ ನವಿಲುಗಳ ವಿನಾ ಕಾಡಿನಲ್ಲಿ ಎಲ್ಲ ಪ್ರಾಣಿಗಳಿಗೂ ನಿದ್ದೆ ಬಂದಿತ್ತು. ಚಂದ್ರ ಗೋಳಿಡುತ್ತಿರುವುದನ್ನು ಕೇಳಿ, ಅವೆರಡೂ, 'ಏನು ಸಮಾಚಾರ?' ಎಂದವು.

ಅವುಗಳ ಧ್ವನಿಯನ್ನು ಕೇಳಿದ ಕೂಡಲೆ ಚಂದ್ರ ತನ್ನ ಗಂಡನ ಶವವನ್ನು ಭೂಮಿಗೆ ಬೀಳಿಸಿದಳು. 'ನನ್ನ ಗಂಡನನ್ನು ನೀವು ಸಾಯಿಸಿದಿರಿ; ಅದೇ ರೀತಿಯಲ್ಲಿ ಮಾನವ, ಪ್ರಾಣಿ, ಪಕ್ಷಿಗಳಾದ ನೀವೆಲ್ಲರೂ ಸಾಯಿರಿ' ಎಂದು ಶಪಿಸಿದಳು.

ಸಾವು ಪ್ರಪಂಚಕ್ಕೆ ಕಾಲಿಟ್ಟದ್ದು ಹೀಗೆ.

ಈ ಸುದ್ದಿಯನ್ನು ಕೇಳಿದ ಹುಂಜ ಸೂರ್ಯನನ್ನು ಎಬ್ಬಿಸಿ, ಕಾಪಾಡೆಂದು ಕೇಳಿಕೊಂಡಿತು. ಮನೆಯ ಹೊರಗೆ ಬಂದ ಸೂರ್ಯ ಮಾನವರೂ ಪ್ರಾಣಿಗಳೂ ಅಳುತ್ತಿರುವುದನ್ನು ಕಂಡನು. ಅವನು ಹೇಳಿದನು, 'ಈಗ ನಾನೇನೂ ಮಾಡಲಾರೆ. ಚಂದ್ರ ಬಂದು ಕೂಗಿದಾಗ ನೀವು ಓಗೊಡಬೇಡಿರೆಂದು ನಿಮಗೆ ಎಚ್ಚರಿಕೆ ಕೊಟ್ಟೆನು. ಈಗ ಕೈಮೀರಿ ಹೋಯಿತು. ನೀವೆಲ್ಲರೂ ಸಾಯಲೇಬೇಕು.'

ಗಿರಿಜನರ ದೃಷ್ಟಿಯಲ್ಲಿ ಸಾವೆಂಬುದು ಅಂತ್ಯವಲ್ಲ; ಜೀವಕ್ಕೆ ನಾಶವಿಲ್ಲ. ಗತಿಸಿದವನು ಭೂಮಿಯಲ್ಲಿರುವ ಹಳ್ಳಿಗಳಂತೆಯೇ ಇರುವ ಇನ್ನೊಂದು ಹಳ್ಳಿಗೆ ಹೋಗಿ ನೆಲಸುತ್ತಾನೆ ಅಷ್ಟೆ. ಬದುಕಿದ್ದಾಗ ಅವನಿಗೆ ಪ್ರಿಯವಾಗಿದ್ದವರೂ ಕಾಲಕ್ರಮೇಣ ಮೃತ್ಯು ಸ್ಪರ್ಶದಿಂದ ಅಲ್ಲಿಗೆ ಹೋಗಿ ಅವನನ್ನು ಸೇರಿಕೊಳ್ಳುತ್ತಾನೆ. ಸಾವಿನಾಚೆಗೂ ಅವನು ತನ್ನ ಮನೆಯವರೊಂದಿಗೆ ಒಬ್ಬನಾಗಿ ಇದ್ದುಬಿಡುತ್ತಾನೆ ಅವರ ಕನಸಿನಲ್ಲಿ ಕಾಣಿಸಿಕೊಳ್ಳುತ್ತಾನೆ. ಅವನು ಇನ್ನೊಂದು ರೂಪದಲ್ಲಿ ಭೂಮಿಗೆ ಹಿಂದಿರುಗುತ್ತಾನೆಂಬುದು ಗಿರಿಜನರಲ್ಲಿ ಅನೇಕರ ನಂಬಿಕೆ.